


# ಅನ್ನಮಾಚಾರ್ಯ

ಅಡಪ ರಾಮಕೃಷ್ಣರಾವ್



ಭಾರತೀಯ
ಸಾಹಿತ್ಯ
ನಿರ್ಮಾಪಕರು

ಒಳ ಬದಿಯ ರಕ್ಷಾಪುಟಗಳಲ್ಲಿ ಕಾಣಿಸಿರುವ ಶಿಲ್ಪಕಲೆಯಲ್ಲಿ ಮೂವರು ಭವಿಷ್ಯವಾದಿಗಳು, ಭಗವಾನ್ ಬುದ್ಧನ ತಾಯಿ ರಾಣಿ ಮಾಯಾಳ ಕನಸನ್ನು ರಾಜ ಶುದ್ಧೋದನನಿಗೆ ವಿವರಿಸುವ ದೃಶ್ಯವಿದೆ. ಅವುಗಳ ಕೆಳಗೆ ಆ ವಿವರಣೆಯನ್ನು ಬರೆದುಕೊಳ್ಳುತ್ತಿರುವ ಬರಹಗಾರ ಕುಳಿತಿದ್ದಾನೆ. ಬರವಣಿಗೆಯನ್ನು ಚಿತ್ರಿಸುವ ಮೊದಲ ಭಾರತೀಯ ಶಿಲ್ಪ ಬಹುಶಃ ಇದೇ ಆಗಿರಬಹುದು.

**ನಾಗಾರ್ಜುನ ಬೆಟ್ಟದ ಶಿಲ್ಪಗಳು ಕ್ರಿ.ಶ. ಎರಡನೆಯ ಶತಮಾನ.**
**ಕೃಪೆ : ರಾಷ್ಟ್ರೀಯ ವಸ್ತು ಸಂಗ್ರಹಾಲಯ, ಹೊಸದೆಹಲಿ**

Annamacharya - Kannada translation of Adapa Ramakrishna Rao's monograph in English by Bhagyalakshmi Padaki. Sahitya Akademi 2000. Rs. 25.00

ISBN : 81-260-0981-0



ಪ್ರಥಮ ಮುದ್ರಣ : 2000

ಸಾಹಿತ್ಯ ಅಕಾದೆಮಿ

ರವೀಂದ್ರ ಭವನ, ೩೫, ಫಿರೋಜ್‌ಷಹಾ ರಸ್ತೆ, ಹೊಸ ದೆಹಲಿ - ೧೧೦ ೦೦೧.
'ಸ್ವಾತಿ', ಮಂದಿರ್‌ಮಾರ್ಗ್, ನವದೆಹಲಿ - ೧೧೦ ೦೦೧
ಸೆಂಟ್ರಲ್ ಕಾಲೇಜ್ ಆವರಣ, ಡಾ॥ ಬಿ.ಆರ್. ಅಂಬೇಡ್ಕರ್ ವೀಧಿ
ಬೆಂಗಳೂರು-೫೬೦ ೦೦೧
ಜೀವನ್ ತಾರಾ ಬಿಲ್ಡಿಂಗ್, ೪ನೇ ಮಹಡಿ, ಡೈಮಂಡ್ ಹಾರ್ಬರ್ ರೋಡ್
ಕಲ್ಕತ್ತಾ - ೭೦೦ ೦೫೩
೧೭೨, ಮುಂಬೈ ಮರಾಠಿ ಗ್ರಂಥ ಸಂಗ್ರಹಾಲಯ ರಸ್ತೆ, ದಾದರ್,
ಬೊಂಬಾಯಿ -೪೦೦ ೦೧೪
ಗುಣ ಬಿಲ್ಡಿಂಗ್ಸ್, ಎರಡನೆ ಮಹಡಿ, ೩೦೪-೩೦೫, ಅಣ್ಣಾ ಸಾಲೈ
ಮದ್ರಾಸ್ - ೬೦೦ ೦೧೮

ಬೆಲೆ: ಇಪ್ಪತ್ತೈದು ರೂಪಾಯಿಗಳು

ಅಕ್ಷರ ಜೋಡಣೆ ಮತ್ತು ಮುದ್ರಣ
ಅನನ್ಯ ಇನ್ಫೋಕಾರ್ಪೊರೇಷನ್
ಬೆಂಗಳೂರು - ೫೬೦ ೦೧೯

## ಪರಿವಿಡಿ

# ಮುನ್ನುಡಿ

ಏಕಮೇವಾದ್ವಿತೀಯನೂ, ತಮೋರಾಜ್ಯದ ಸೀಮೆಯಾಚೆಗೆ ನೆಲಸಿರುವ ಕಾಂತಿಪುರುಷನೂ, ಎಲ್ಲ ಜೀವಿಗಳಿಗೂ ತಪ್ಪದೆ ಒದಗುವ ಒಬ್ಬನೇ ಮಿತ್ರನೂ ಆದ, ಸರ್ವೋತ್ತಮ-ಚೇತನದ ಸಾನ್ನಿಧ್ಯ ಮತ್ತು ಸಾಮರ್ಥ್ಯದ ಬಗೆಗಿನ ವಿಶ್ವಾಸವನ್ನು ಪದ್ಯ ಹಾಗೂ ಗೀತೆಗಳಲ್ಲಿ ದೃಢಪಡಿಸುವ ಅವಕಾಶವು ಕೆಲವೇ ಪುಣ್ಯಾತ್ಮರಿಗೆ ದೊರೆಯುವುದು. ಅನ್ನಮಾಚಾರ್ಯರು ಪರಮಾತ್ಮನಿಗೆ ಆಪ್ತರಾದ, ಅಂತಹ ಕವಿಗಳ ತೃಪ್ತ-ವರ್ಗಕ್ಕೆ ಸೇರಿದವರು. ಅವರ ಹರ್ಷೋತ್ಸಾಹದ ಉದ್ಗಾರಗಳು, ಏಕಕಾಲದಲ್ಲಿ ಸಾಹಿತ್ಯ ಸಮೃದ್ಧಿಯನ್ನೂ, ದೈವೀ-ಶಕ್ತಿಯ ಶೋಧನೆಯಲ್ಲಿ ಮಾನವ ಜೀವಿಯು ಅನುಭವಿಸುವ ನೋವು-ನಲಿವುಗಳ ಸವಿಯನ್ನೂ ಒದಗಿಸುವುವು.

ಅನ್ನಮಾಚಾರ್ಯರು, ದ್ರಾವಿಡ ಗುಂಪಿಗೆ ಸೇರಿದ ಪ್ರಮುಖ ಭಾಷೆಗಳಲ್ಲಿ ಒಂದಾದ ತೆಲುಗಿನಲ್ಲಿ, ದೈವಸ್ತುತಿಯ ಸಾವಿರಾರು ಗೀತೆಗಳನ್ನು ರಚಿಸಿದರು. ಅವರು ವಿಶ್ವದ ಸರ್ವವ್ಯಾಪ್ತ ದೈವ ವಿಷ್ಣುವಿನ ಅವತಾರವಾದ ಶ್ರೀ ವೆಂಕಟೇಶ್ವರನ ಮೋಹಕ ರೂಪದಲ್ಲಿ, ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲು ಬಯಸಿದವರು. ಹೀಗಾಗಿ, ಪರಮಾತ್ಮನು ಅವರನ್ನು ತನ್ನ ಆಸ್ಥಾನ-ಕವಿಯಾಗಿ ಆಯ್ಕೆ ಮಾಡಿಕೊಂಡು, ಅವರಿಂದ ಪ್ರತಿದಿನವೂ ಹೊಸ-ಹೊಸ ಹಾಡುಗಳ ಗಾಯನವನ್ನು ಕೇಳುವ ವೇಳೆಗಾಗಿ, ಉತ್ಸುಕತೆಯಿಂದ ಕಾಯುತ್ತಿದ್ದನು.

ಸುಮಾರು ಐದು ನೂರು ವರ್ಷಗಳ ಹಿಂದೆ, ಅವರ ಜೀವಿತಾವಧಿಯಲ್ಲಿ, ಅನ್ನಮಾಚಾರ್ಯರ ಗೀತೆಗಳು ಅಗಾಧ ಜನಪ್ರಿಯತೆಯನ್ನು ಸಂಪಾದಿಸಿದ್ದವು. ಆದರೆ ಕೆಲವು ನಿಗೂಢ ಕಾರಣಗಳಿಂದ, ಅವು ಕ್ರಮೇಣವಾಗಿ ರೂಢಿಯಿಂದ ಹಿಂದೆಸರಿದು ಮರೆಯಾಗಿದ್ದು, ಕಳೆದ ಶತಮಾನದಲ್ಲಿ ಪುನಶ್ಶೋಧಿತವಾಗಿ ಮತ್ತು ಪ್ರಕಾಶನಗೊಂಡು ಜನಪ್ರಿಯವಾಗುವವರೆಗೆ, ಪೂರ್ತಿಯಾಗಿ ಮರೆಯಲ್ಪಟ್ಟಿದ್ದವು. ಕಳೆದ ಮೂವತ್ತು ವರ್ಷಗಳಲ್ಲಿ ವಿದ್ವಾಂಸರ ಹಾಗೂ ಸಂಗೀತಜ್ಞರ ಶ್ರದ್ಧಾಪೂರ್ಣ ಪ್ರಯತ್ನವು, ತೆಲುಗು ಭಾಷಿಕರು ಅನ್ನಮಾಚಾರ್ಯರ ಪ್ರತಿಭೆಯನ್ನು ಅರ್ಥಮಾಡಿಕೊಂಡು- ಅವರನ್ನು ಅಭಿನಂದಿಸುವಂತೆ ಮಾಡುವಲ್ಲಿ ಯಶಸ್ವಿಯಾಗಿದೆ. ಅವರ ಗೀತೆಗಳು ಚಿಂತನೆಯ ಗಾಂಭೀರ್ಯ, ಧಾರ್ಮಿಕ ಭಾವದ ಪ್ರಾಬಲ್ಯ, ಅಭಿವ್ಯಕ್ತಿಯ ಆನಂದಾತಿಶಯದ ಲಕ್ಷಣಗಳಿಂದ ಕೂಡಿದ್ದು, ಬೇರೆ ಭಾಷೆಗಳ ಸಂತ-ಕವಿಗಳ ಅಂಥವೇ ರಚನೆಗಳೊಡನೆ ಹೋಲಿಸಬಲ್ಲಂಥ ಉತ್ಕೃಷ್ಟ ಅರ್ಹತೆಯನ್ನು ಹೊಂದಿದ್ದರೂ, ಅವರ ಹೆಸರು ಇನ್ನೂ ಅನೇಕರಿಗೆ ಅಪರಿಚಿತವಾಗಿದೆ. ಈ ಪ್ರಬಂಧವು ಅಂಥ ಕೊರತೆಯನ್ನು ಪೂರೈಸಲು ಉದ್ದೇಶಿಸಿದೆ.

ಈ ಕಾರ್ಯವಾದರೂ ಸುಲಭವಾದುದಾಗಿರಲಿಲ್ಲ. ಇಲ್ಲಿ "ದೈವಿಕ ಸಂಪತ್ತು" ಸುಮಾರು ಹದಿನೈದು ಸಾವಿರ ಗೀತೆಗಳ ರೂಪದಲ್ಲಿದ್ದು, ನಾನು ಹಲವಾರು ನಿರ್ಬಂಧಗಳ

ಮಧ್ಯೆ ಕಾರ್ಯವೆಸಗಬೇಕಾಯಿತು. ಅವರ ಗೀತೆಗಳ ಆಯ್ಕೆಯಲ್ಲಿ, ಅಲ್ಲಿ ವ್ಯಕ್ತವಾದ ಭಾವನೆ-ಚಿಂತನೆಗಳ ಹಾಗೂ ಧ್ವನಿ-ಧಾಟಿಗಳ ವಿಶಾಲ ವೈವಿಧ್ಯತೆಯನ್ನು ಪರಿಚಯಿಸುವ ಬಯಕೆಯಿಂದ ನಾನು ನಿರ್ದೇಶಿತನಾಗಿದ್ದೇನೆ. ಈ ಪುಸ್ತಕದಲ್ಲಿ ಮಾಡಿರುವ ಅನುವಾದಗಳು ನನ್ನವಾಗಿದ್ದು, ಮೂಲ ಪದ್ಯಗಳ ಸೊಗಡನ್ನು ಹಿಡಿದಿಡಲು ಹಾಗೂ ಅವುಗಳ ಭಾಷೆ ಭಾವಗಳನ್ನು ಉಳಿಸಿಕೊಳ್ಳಲು ಎಚ್ಚರದಿಂದ ಶ್ರಮಿಸಿದ್ದೇನೆ.

ಅನ್ನಮಾಚಾರ್ಯರಂತಹ ಘನವ್ಯಕ್ತಿತ್ವದ ಸಂತಕವಿಯನ್ನು ಜಗತ್ತಿಗೇ ಪರಿಚಯಿಸುವ ಅವಕಾಶವನ್ನು ಯಾರೂ ಪುನಃ ಪುನಃ ಪಡೆಯಲಾರರು. ಹಾಗೂ ನನಗೆ ಪ್ರಾಪ್ತವಾಗಿರುವ ಈ ಗೌರವದ ಬಗ್ಗೆ ನಾನು ಪೂರ್ಣ ಜಾಗೃತನಾಗಿದ್ದೇನೆ. ಈ ಸಂಪಾದನ ಕಾರ್ಯದ ನಿರ್ವಹಣೆಯಲ್ಲಿ ನಾನು ನನ್ನ ಗೆಳೆಯರಿಂದ ಹಲವಾರು ಸಣ್ಣ ಪುಟ್ಟ, ಹೆಸರು-ನೆನಪುಗಳಿರದ, ಪ್ರೀತಿ ಮತ್ತು ಸಹೃದಯತೆಯ ನೆರವನ್ನು ಸಾಕಷ್ಟು ಪಡೆದಿದ್ದು -ಇಲ್ಲಿ ಹೆಸರಿಸಲಿಲ್ಲವೆಂಬ ಮಾತ್ರಕ್ಕೆ ಅವು ಸ್ಮರಿಸದೇ ಹೋದವುಗಳಲ್ಲ ಎಂಬುದನ್ನಷ್ಟೇ ಹೇಳಿದರೆ ಸಾಕು.

ಪ್ರಶಾಂತಿ ನಿಲಯಂ

2, ಅಕ್ಟೋಬರ್ 1987.

ಅಡಪ ರಾಮಕೃಷ್ಣರಾವ್

೧

# ವೇದಾಂತಮಯ ಪರಿಸರ

ಧಾರ್ಮಿಕ ಉನ್ಮಾದವು, ಹಲವಾರು ಸಂದರ್ಭಗಳಲ್ಲಿ ಭಕ್ತಿಗೀತೆಗಳ ಸ್ವರೂಪದಲ್ಲಿ, ಆನಂದಾಭಿವ್ಯಕ್ತಿಯನ್ನು ಪಡೆದುಕೊಳ್ಳುತ್ತದೆ. ಸುದೈವದಿಂದ, ಇದೇ ಭಾರತೀಯ ಸಾಹಿತ್ಯದ ಪರಮೋನ್ನತ ಕೀರ್ತಿಶಿಖರವೆನಿಸಿಕೊಂಡಿದೆ. ಮಿತ್ರ, ವರುಣ ಮತ್ತು ಉಷಸ್ ದೇವತೆಗಳನ್ನು ಉದ್ದೇಶಿಸಿರುವ ದಿವ್ಯ ಸುಂದರ ಸ್ತೋತ್ರಗಳು, ಭಾರತದ-ಅಷ್ಟೇ ಏಕೆ-ಇಡೀ ವಿಶ್ವದ, ಪುರಾತನ ಶಾಸ್ತ್ರವೆನಿಸಿದ ಋಗ್ವೇದದಲ್ಲಿ ಲಭ್ಯವಿವೆ. ಕಾಲಕ್ರಮದಲ್ಲಿ, ಈ ಪರಂಪರೆಯು ಅನೇಕ ಕಾವ್ಯರ್ಷಿಗಳಿಂದ ಶ್ರೀಮಂತಗೊಂಡಿತು. ಅವರೆಲ್ಲರೂ, ಭಾರತದ ವಿವಿಧ ಭಾಷೆಗಳಲ್ಲಿ ಅಸಂಖ್ಯಾತ ಅಮರ ಭಕ್ತಿ - ಪ್ರೇಮ ಗೀತೆಗಳನ್ನು ರಚಿಸಿದರು. ಮೊದಲಲ್ಲಿ ಅನುರಕ್ತಿ ನಂತರ ವಿರಹವೇದನೆ ಹಾಗೂ ಅಂತ್ಯದಲ್ಲಿ ಪುನರ್ಮಿಲನದ ತಲ್ಲೀನತೆ - ಹೀಗೆ ಧಾರ್ಮಿಕ ಅನುಭಾವದ ಎಲ್ಲ ಪರಿಧಿಯಲ್ಲಿಯೂ, ಅವು ಸಂಚರಿಸುತ್ತವೆ. ಕನ್ನಡದ ಪುರಂದರ - ಕನಕದಾಸರ ಪದಗಳು, ತಮಿಳಿನ ಆಳ್ವಾರರು ಮತ್ತು ನಯನ್ಮಾರರ ಕೃತಿಗಳು, ಸಂಸ್ಕೃತದ ಜಯದೇವನ ಗೀತೆಗಳು, ಹಿಂದಿಯಲ್ಲಿನ ಸೂರದಾಸ, ಮೀರಾಬಾಯಿ ಮತ್ತು ಗುಜರಾತಿನ ನರಸೀಮೆಹ್ತಾ ಹಾಗೂ ಮರಾಠಿಯ ತುಕಾರಾಂ, ನಾಮದೇವರ ರಚನೆಗಳು - ಇವು ಕೇವಲ ಉದಾಹರಣೆಗಳಷ್ಟೇ. ಇವೆಲ್ಲವೂ, ಅಧ್ಯಾತ್ಮಿಕ ಹರ್ಷಾವೇಶ ಹಾಗೂ ಕಾವ್ಯದ ಗುಣೋತ್ಕರ್ಷಗಳೆರಡೂ ಸಮ್ಮಿಳಿತವಾದ ಸಂಪತ್ತೆಂದು ಪ್ರಶಂಸಿಸಲ್ಪಟ್ಟಿವೆ.

ತೆಲುಗು ಭಾಷೆಯ ಕವಿಗಳಾದ ಅನ್ನಮಾಚಾರ್ಯ, ಕ್ಷೇತ್ರಯ್ಯ, ರಾಮದಾಸ ಮತ್ತು ತ್ಯಾಗರಾಜರು ಭಗವಂತನ ಕೃಪಾಪಾತ್ರರಾಗಿ ಆತನ ಆಪ್ತ ಭಕ್ತವರ್ಗಕ್ಕೆ ಸೇರಿದವರು. ಸಂಗೀತಕ್ಕೆ, ಭೌತಿಕಜೀವಿಗಳನ್ನು ದೈವೀಲೋಕಕ್ಕೆ ಒಯ್ಯುವ ಅಭಿಜಾತ ಸಾಮರ್ಥ್ಯವಿದೆಯೆಂಬುದನ್ನು, ಅವರು ಚೆನ್ನಾಗಿ ಅರಿತಿದ್ದರು. ಹಾಗೆಂದೇ ತಮ್ಮ ಸಂಗೀತ ಕಾವ್ಯ ಪ್ರತಿಭೆಗಳನ್ನು ಸ್ವಯಂ ಆತ್ಮೋದ್ಧಾರ ಸಾಧನೆಗೆ ಬಳಸಿಕೊಂಡರು. ಶಾರ್ಙದೇವನು ತನ್ನ 'ಸಂಗೀತ ರತ್ನಾಕರ' ಕೃತಿಯಲ್ಲಿ, ಮಾನವನು ಚತುರ್ವಿಧ ಪುರುಷಾರ್ಥಗಳೆಲ್ಲವನ್ನೂ, ಸಂಗೀತದ ಮೂಲಕವೇ ಸಾಧಿಸಿಕೊಳ್ಳಬಹುದೆಂದು ಸಾರಿದ್ದರೂ, ಭಕ್ತಿಗೀತ ರಚನಕಾರರು ಮಾತ್ರ ಅದು ಧರ್ಮ ಮತ್ತು ಮೋಕ್ಷ ಸಂಪಾದನೆಗಳಿಗಷ್ಟೇ ಸಾಧನವೆಂದು ಪರಿಗಣಿಸಿದರು.

ಅನ್ನಮಾಚಾರ್ಯರು ಕಾಲಮಾನದ ದೃಷ್ಟಿಯಿಂದ ಮಾತ್ರವಲ್ಲ, ತಮ್ಮ ಅಪೂರ್ವ ಕಲಾವಂತಿಕೆ ಹಾಗೂ ಭಾವ-ಚಿಂತನೆಗಳ ವ್ಯಾಪ್ತಿಯಿಂದಲೂ, ತೆಲುಗಿನ ಭಕ್ತಿ - ಸ್ತೋತ್ರ ಸಾಹಿತಿಗಳಲ್ಲಿ ಮೊದಲಿಗರೆಂದೇ ಹೇಳಬೇಕು. ಈ ಕ್ಷೇತ್ರದಲ್ಲಿ ಅಗ್ರಗಣ್ಯರೆನಿಸಿದ ಅವರು, ಪ್ರೇಮ ಮತ್ತು ದೈವಿಕತೆಯ ಎಳೆಗಳೆರಡನ್ನೂ ಸಮಾನವಾಗಿ ಹೆಣೆಯಬಲ್ಲವರಾಗಿದ್ದು, ತಮ್ಮ ಮುಂದಿನವರಿಗೆ ಮಾರ್ಗದರ್ಶಿಗಳಾದರು. ಕ್ಷೇತ್ರಯ್ಯರ ಕೃಷ್ಣ ಪ್ರಣಯಲೀಲಾ ಗೀತೆಗಳಲ್ಲಿ ಹಬ್ಬಿರುವ ಶೃಂಗಾರ ರಸ ಹಾಗೂ ತ್ಯಾಗರಾಜರ ರಾಮಮಹಿಮ ವರ್ಣನಾ ಗೀತೆಗಳಲ್ಲಿನ ಹರ್ಷೋಲ್ಲಾಸ-ಈ ಎರಡೂ ಅಂಶಗಳು, ಅನ್ನಮಾಚಾರ್ಯರು ತಮ್ಮ ಕೃತಿಗಳಲ್ಲಿ ಅಳವಡಿಸಿಕೊಂಡಿರುವ ಜ್ಞಾಪಕ - ರೂಪಗಳೆನಿಸುತ್ತವೆ.

ಅನ್ನಮಾಚಾರ್ಯರು ಪದಿನೈದನೆಯ ಶತಮಾನದಲ್ಲಿ ಜೀವಿಸಿದ್ದು, ತಮ್ಮ ಜೀವಮಾನದ ಬಹುಕಾಲವನ್ನು ದಕ್ಷಿಣ ಭಾರತದಲ್ಲಿಯೇ ಅತಿ ಜನಪ್ರಿಯ ಯಾತ್ರಾ ಸ್ಥಳವಾದ ತಿರುಪತಿ ಹಾಗೂ ಅದರ ಸುತ್ತಮುತ್ತಲಲ್ಲಿಯೇ ಕಳೆದರು. ಇಲ್ಲಿ, ಮಹಾವಿಷ್ಣುವಿನ ಅತ್ಯಂತ ಮಹಿಮಾವತಾರವಾದ ಶ್ರೀ ವೆಂಕಟೇಶ್ವರನ ಸನ್ನಿಧಿಯು, ಏಳು ಪ್ರಮುಖ ಶಿಖರಗಳುಳ್ಳ ಗಿರಿ ಶ್ರೇಣಿಯ ಮೇಲೆ ನೆಲೆಗೊಂಡಿದೆ. ಈ ಕಾರಣಕ್ಕಾಗಿಯೇ, ಆತನ ಭಕ್ತರು ತಮ್ಮ ದೈವವನ್ನು 'ಏಳು ಗಿರಿಯೊಡೆಯ'ನೆಂದೋ, ಅಥವಾ 'ಬೆಟ್ಟದ ದೇವ'ನೆಂದೋ ಕರೆಯುತ್ತಾರೆ. ಸನ್ನಿಧಿಯ ಆವಾಸವಾದ ಅತ್ಯುನ್ನತ ಗಿರಿಯು 'ವೆಂಕಟಾದ್ರಿ' ಎಂದು ಹೆಸರಾಗಿರುವುದರಿಂದ ಆ ದೇವನನ್ನು 'ವೆಂಕಟಾಧೀಶ'ನೆಂದೂ ಸಂಬೋಧಿಸುತ್ತಾರೆ.

ಅನ್ನಮಾಚಾರ್ಯರು ತಮ್ಮ ಎಳೆಯ ವಯಸ್ಸಿನಲ್ಲಿಯೇ, ಶ್ರೀ ವೆಂಕಟೇಶ್ವರನ ಸಂಮೋಹಕ ರೂಪು ಹಾಗೂ ಅಪಾರ ಕೃಪೆಯ ವಲಯಕ್ಕೆ ಬಂದು, ವೈಷ್ಣವ ಮತದ ವಿಶಿಷ್ಟಾದ್ವೈತ ಪಂಥಕ್ಕೆ ಮತಾಂತರ ಹೊಂದಿದರು. ಈ ಪಂಥವು ಭಕ್ತಿ ಮತ್ತು ಪ್ರಪತ್ತಿ (ಶರಣಾಗತಿ)ಗಳೇ ಮುಕ್ತಿಗೆ ಸುಲಭ-ಸಾಧನವೆಂದು ಸಾರುತ್ತದೆ. ಹೊಸ ಮತಾನುಯಾಯಿಯಾಗಿ ಅವರು, ಆ ಸಿದ್ಧಾಂತದ ಪ್ರಮುಖ ಗುರುಗಳಾದ ಯಾಮುನಾಚಾರ್ಯ ಮತ್ತು ರಾಮಾನುಜರು ಪ್ರತಿಪಾದಿಸಿದ ತತ್ವಗಳಿಗೆ ಆಧಾರವೊದಗಿಸಬಲ್ಲಂತಹ ವಿಷ್ಣುಸ್ತುತಿಗಳನ್ನು ತಮಿಳು ಭಾಷೆಯಲ್ಲಿ ರಚಿಸಿದ, ದೈವಭಕ್ತಿಯಿಂದ ಉನ್ಮತ್ತರಾದ ಆಳ್ವಾರರ ಶ್ರೇಷ್ಠ ಪರಂಪರೆಯ ಉತ್ತರಾಧಿಕಾರಿಗಳಾದರು.

ಪುರಾತನ ಕಾಲದ ಆಳ್ವಾರರಂತೆ, ಅನ್ನಮಾಚಾರ್ಯರೂ ಅಸಂಖ್ಯ ಪದ್ಯಗಳಲ್ಲಿ ವಿಷ್ಣು ಮಹಾತ್ಮೆಯನ್ನು ಹಾಡುತ್ತಾ, ಆತನ ಔನ್ನತ್ಯವನ್ನು ಹೊಗಳುತ್ತಾ, ಪೂರ್ಣ ಶರಣಾಗತಿ ಸಿದ್ಧಾಂತವನ್ನು ಬೋಧಿಸುತ್ತಾ ತಮ್ಮ ಜೀವಮಾನವನ್ನು ಕಳೆದರು. ಅವರು ಒಂದಾದರೂ ಹೊಸ ಗೀತೆಯನ್ನು ರಚಿಸಿ ಅದನ್ನು ಪರಮಾತ್ಮನಿಗೆ ನಿತ್ಯ ನೈವೇದ್ಯವಾಗಿ ಸಮರ್ಪಿಸದೇ, ಒಂದು ದಿನವೂ ಕೂಡ ಕಳೆಯುತ್ತಿರಲಿಲ್ಲವೆಂದು ಹೇಳುತ್ತಾರೆ. ಕಾಯಕದ ಕುರಿತು ಆಳವಾದ ಅರಿವು, ಅದರಂತೆಯೇ 'ಅಹಂ'ನ ಅಳಿವು-ಇವುಗಳ ಕಾಳಜಿಯು ಅವರ ಗೀತೆಗಳಲ್ಲೊಂದರಲ್ಲಿ ನಿಚ್ಚಳವಾಗಿ ಒಡಮೂಡಿದೆ.

ನಿನ್ನ ಚರಣಗಳಿಗರ್ಪಿಸಿದ
ಈ ಆರಾಧನಾ-ಕೃತಿಗಳನು
ಒಪ್ಪಿಸಿಕೋ, ಓ ದೇವ
ನಿನ್ನ ಹಿರಿಮೆಯನು ಉದ್ದಗಲಕೂ
ಪಸರಿಸುವ, ಹೊಸ ಕುಸುಮಗಳನು

ಪದ್ಯವೊಂದೇ ಸಾಕೋ
ಸದಾ ನಮ್ಮೆಲ್ಲರನು ಸಲಹಲಿಕೆ,
ಉಳಿದುವೆಲ್ಲವು ಸೇರಿಕೊಳ್ಳಲಿ
ನಿನ್ನಯ ಸಿರಿ ಭಂಡಾರಕೆ

ಸಾರಯುತವೋ ನಿನ್ನ ಹೆಸರು,
ಸಾರಲು ಸುಲಭ - ಬಲು ಫಲಕಾರಿ
ನೀನೇ ಎನ್ನ ಪೊರೆವವನು
ಇದೇ ನನ್ನ ಸಿರಿ ಸಂಪದವು

ನೆಲೆಸು ನೀ ಎನ್ನ ನಾಲಿಗೆಯಲಿ
ನುಡಿಸಲೆಂದು ಸಾವಿರ ಸ್ತುತಿಗಳನು
ಹರಸು ನೀ, ನಿನ್ನ ಕೀರುತಿಯನು
ನಾ ನಿರತವೂ ಸಾರುತಿರಲೆಂದು

ಸಾಸಿರ ಹೆಸರಿನ, ಓ ದೊರೆಯೇ
ನಾನಾರಯ್ಯನಿನ್ನನು ಸ್ತುತಿಸಿ ಪಾಡಲು?
ಪಾರವಿಲ್ಲದ ಕೃಪೆಯಿಂದ ನೀನೆನಗೆ
ಪರಮಭಾಗ್ಯವನೆ ಕರುಣಿಸಿರಲು.

ನಾ ನಿನ್ನ ಕರದೊಳಗಣ ಕರಣ, ಬೇರೇನಲ್ಲ
ಈ ಹಾಡುರಚನೆಗಳಿಗೆ ಕಾರಣನು ನಾನಲ್ಲ,
ಓ ವೆಂಕಟೇಶನೇ, ನಾ ನಿನ್ನ ಚರಣಸೇವಕನೋ,
ಈ ನನ್ನ ನಮ್ರಕಾಣಿಕೆಯ ಸ್ವೀಕರಿಸೋ.

ಅನ್ನಮಾಚಾರ್ಯರ ಪ್ರತಿ ಗೀತೆಯಲ್ಲಿಯೂ ಶ್ರೀ ವೆಂಕಟೇಶ್ವರನ ರೂಪ-ವರ್ಣನೆ, ಆತನ ಗುಣಗಾನ, ಆತನ ಸನ್ನಿಧಾನ ಮತ್ತು ಸುತ್ತಣ ವಾತಾವರಣದ ಬಣ್ಣನೆ, ವೈಷ್ಣವ ಮತದ ವಿಶಿಷ್ಟಾದ್ವೈತ ವೇದಾಂತದ ಸಾರ ಬೋಧನೆ, ಇವೆಲ್ಲವೂ ಸುಮದೊಳಗಿನ ಸುಗಂಧದಂತೆ ತಪ್ಪದೇ ಅಡಗಿವೆ. ಈ ಸಂತ ಕವಿಯ ಜೀವನ ಚಿಂತನೆಗಳನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲು ವೈಷ್ಣವ ಮತದ ಉಗಮ, ಅದರ ಮೂಲ ತತ್ವಗಳು ಹಾಗೂ ಶ್ರೀ ವೆಂಕಟೇಶ್ವರನ ಅವತಾರ, ಇವುಗಳನ್ನು ಕುರಿತಾದ ಸೂಕ್ತ ತಿಳುವಳಿಕೆಯು ಅತ್ಯಾವಶ್ಯಕ.

'ಪರಮಾತ್ಮನು ಒಬ್ಬನೇ, ಆತನಿಗೆ ಎರಡನೆಯವರಿಲ್ಲ' (ಏಕಮೇವ-ಅದ್ವಿತೀಯ) ಎಂದು ವೈದಿಕ ಋಷಿಗಳು ಒತ್ತಿ ಹೇಳುತ್ತಾರೆ ಹಾಗೂ ಜ್ಞಾನಿಗಳು, 'ದೇವನೊಬ್ಬನೇ - ರೂಪ ಹಲವು' ಎಂದೆನ್ನುತ್ತಾರೆ. ಸರ್ವೋತ್ತಮನ ಹಲವಾರು ರೂಪಗಳಲ್ಲಿ ಅತಿ ಮನೋಹರವಾದುದು, ವಿಶ್ವದ ಕೃಪಾ ಪೋಷಕನೂ, ರಕ್ಷಕನೂ ಆದ ಮಹಾವಿಷ್ಣುವಿನದು. ಇಡೀ ಜಗವನ್ನು ಆವರಿಸಿಕೊಂಡಿರುವುದರಿಂದ ಆತನನ್ನು ವಿಷ್ಣುವೆಂದು ಕರೆಯುವರು ಹಾಗೂ ಆತನೇ ಎಲ್ಲ ಜೀವಿಗಳ ಅಂತಿಮ ಗುರಿಯಾದುದರಿಂದ ನಾರಾಯಣನೆಂದೂ ಸಂಬೋಧಿಸುವರು. ಮಮತೆ, ಕೋಮಲತೆ, ದಯೆ, ಅನುಕಂಪ ಮತ್ತು ಹೃದಯ ಮಾಧುರ್ಯ ಇವೆಲ್ಲವೂ ಸೇರಿದಂತೆ, ಸಕಲ ಕಲ್ಯಾಣ ಗುಣ ಪರಿಪೂರ್ಣನಾದ ಆತನು ತನಗೆ ಶರಣಾಗುವವರ ಮೇಲೆ ಕರುಣೆ ತೋರಲು ಸದಾ ಉತ್ಸುಕನಾಗಿರುವನು.

ವಿಷ್ಣುವು ಮೊತ್ತಮೊದಲಿಗೆ ಗೋಚರನಾದುದು ಋಷಿಮುನಿಗಳ ವಿಶಾಲ ಅಂತಃಸ್ಸಾಕ್ಷಿಗೆ, ವೇದಯುಗದ ಆದಿಯಲ್ಲಿ. ಉದಯ ಸೂರ್ಯನಾಗಿ ಅವರಿಂದ ಗುರುತಿಸಲ್ಪಟ್ಟು ಸೌರದೇವತೆಯೆಂದು ಕರೆಸಿಕೊಂಡನು. ಆದರೆ ಬ್ರಾಹ್ಮಣೀ ಪರಂಪರೆಯಲ್ಲಿ, ಆತನ ಘನತೆಯು ತ್ವರಿತದಲ್ಲಿಯೇ ಹಿರಿದಾಗಿ, 'ದೇವೋತ್ತಮ'ನೆಂದು ಘೋಷಿಸಲ್ಪಟ್ಟನು. ಎಲ್ಲ ಧಾರ್ಮಿಕ ಕ್ರಿಯೆಗಳ ಪ್ರಾರಂಭದಲ್ಲಿಯೂ ಪಠಿಸಲೇಬೇಕೆಂದು ವಿಧಿತವಾಗಿರುವ ಋಗ್ವೇದದ, ಸರ್ವವೇದ್ಯ ಶ್ಲೋಕವೊಂದು "ಜ್ಞಾನಿಗಳು ವಿಷ್ಣುವಿನ ಅತ್ಯುನ್ನತ ಸ್ಥಾನವನ್ನು, ಸ್ವರ್ಗದೆಡೆಗೆ ವ್ಯಾಪಿಸಿರುವ ಕಣ್ಣೆಂದು ಸದಾ ಅವಲೋಕಿಸುವರು"[1] ಎಂದು ಸಾರುತ್ತದೆ. ಇನ್ನೊಂದು ಶ್ಲೋಕದಲ್ಲಿ ದೀರ್ಘತಮಸರು ಉಪದೇಶಿಸುತ್ತಾರೆ: "ಪರಮ ಸತ್ಯದ ಸಾಕ್ಷಾತ್ಕಾರವನ್ನು ಅಪೇಕ್ಷಿಸುವವರೇ, ವಿಷ್ಣುನಾಮವು ನಿಮ್ಮನ್ನು ಅದರೆಡೆಗೆ ನಿಶ್ಚಯವಾಗಿ ಒಯ್ಯುವುದೆಂಬ ದೃಢ ವಿಶ್ವಾಸದಿಂದ, ಅದನ್ನು ಒಮ್ಮೆಯಾದರೂ ಉಚ್ಚರಿಸಿರಿ."[2] ಅದೇ ವೇದದಲ್ಲಿ ಉಕ್ತವಾಗಿರುವ 'ಉರು ಕ್ರಮ', 'ತ್ರಿವಿಕ್ರಮ' ಮತ್ತು 'ಪರಮಂಪದಂ' ಎಂಬಿತ್ಯಾದಿ ವಿಷ್ಣುವನ್ನುದ್ದೇಶಿಸಿದ ಪದಗಳು, ಉಳಿದ ದೈವಗಳಿಗಿಂತಲೂ ಆತನೇ ಪ್ರಮುಖನೆಂದು, ಆ ಯುಗದಲ್ಲಿಯೇ ಸ್ಪಷ್ಟವಾಗಿ ಸಾಧಿಸಿವೆ. ಆದರೂ ವಿಷ್ಣುವು ಆ ಕಾಲಕ್ಕೆ, ಪ್ರಧಾನವಾಗಿ ಧಾರ್ಮಿಕ ಯಜ್ಞಗಳೊಂದಿಗೆ ಮಾತ್ರ ಸಂಬಂಧಿತನಾಗಿದ್ದು, ದಯಾಳು ದೈವವೆಂದೂ, ಭಕ್ತಿಯ ಏಕಮೇವ ಗುರಿ ಎಂದೂ ಪ್ರಾಮುಖ್ಯ ಪಡೆದುದು, ನಂತರದ ಬೆಳವಣಿಗೆಯೇ ಎಂಬುದನ್ನು ಇಲ್ಲಿ ಒಪ್ಪಿಕೊಳ್ಳಲೇಬೇಕು.

ಋಗ್ವೇದದ ವಿಷ್ಣು, ಬ್ರಾಹ್ಮಣಗಳ ವಿಶ್ವದೇವ ನಾರಾಯಣ ಹಾಗೂ ನಂತರದಲ್ಲಿ ವೃಷ್ಣಿಕುಲದ ಜನಪ್ರಿಯ ದೈವ ವಾಸುದೇವ ಕೃಷ್ಣ-ಈ ಸಂಯೋಜನೆಯು, ಕಾಲಕ್ರಮದಲ್ಲಿ ವೈಷ್ಣವತ್ವದ ಉದಯಕ್ಕೆ ಕಾರಣವಾಯಿತು. ಆ ಮತವು, ವಿಷ್ಣುವೇ ಸರ್ವೋತ್ತಮ ದೈವ ಹಾಗೂ ಆತನಲ್ಲಿ ಭಕ್ತಿ ಮಾಡುವುದೇ ಮಾನವ ಜೀವಿತದ ಪರಮೋದ್ದೇಶವೆಂದು ನಂಬುತ್ತದೆ. ವೈಕುಂಠವು ಆತನ ನಿವಾಸ, ಲಕ್ಷ್ಮಿಯು ಆತನ ದೈವಿಕ ಸಂಗಾತಿ, ದಯೆಯು ಆತನ ಪ್ರಧಾನ ಗುಣ. ವಿಶ್ವದ ಅಸಂಖ್ಯ ಲೋಕಗಳ ಸೃಷ್ಟಿ-ಸ್ಥಿತಿ-ಲಯ ಇವುಗಳೇ ಆತನ ಲೀಲೆ, ಮತ್ತು ಧರ್ಮದ ಉದ್ಧಾರ ಹಾಗೂ ಪಾಪ ವಿನಾಶಗಳು, ಆತನ ಪ್ರಮುಖ ಕಾರ್ಯಗಳು. ದುರ್ಜನ ಶಿಕ್ಷಣ ಮತ್ತು ಸಜ್ಜನ ರಕ್ಷಣೆಗಾಗಿ ಆತನು

ಸಶರೀರನಾಗಿ ಕಾಲಕಾಲಕ್ಕೆ, ಭುವಿಗಿಳಿದು ಬರುತ್ತಾನೆ. ಆತನ ಈ ಸ್ವರೂಪವನ್ನು ಅವತಾರವೆನ್ನುತ್ತಾರೆ.

ವೈಷ್ಣವ ವೇದಾಂತದ ಪ್ರಕಾರ ಅವತಾರವೆನ್ನುವುದು, ವಿಷ್ಣುವು ಸ್ವಯಂ ಗೋಚರನಾಗುವ ಐದು ಸ್ವರೂಪಗಳಲ್ಲಿ ಒಂದು ಮಾತ್ರ. 'ಪರ' ಅಥವಾ ಅತೀಂದ್ರಿಯ ಸ್ವರೂಪದಲ್ಲಿ ಆತನು ವಾಸುದೇವ, ಸರ್ವೋತ್ತಮನು ಹಾಗೂ ಮಾನವನ ಅನುಭವಕ್ಕೆ ಅತೀತನಾದವನು. 'ವ್ಯೂಹ' ಅಥವಾ ಉದ್ಭವ ರೂಪ ಎಂಬುದು ಜಗತ್ತಿನ ಸೃಷ್ಟಿ-ಸ್ಥಿತಿ-ಲಯ ಕಾರಕನಾಗಿ, ಆತನ ಕ್ರಿಯಾ ಸ್ವರೂಪ. 'ವಿಭವ' ಅಥವಾ ಸಶರೀರ ಸ್ವರೂಪವು ಭೌತಿಕ ರೂಪದಲ್ಲಿ ಆತನು ಭೂಮಿಗೆ ಬರುವುದಕ್ಕೆ ಸಂಬಂಧಿಸಿದುದಾಗಿದೆ. 'ಅಂತರ್ಯಾಮಿ' ಅಥವಾ ಅಂತರ್ಗತ ಸ್ವರೂಪದಲ್ಲಿ, ಆತನು ಎಲ್ಲ ಜೀವಿಗಳ ಹೃದಯದಲ್ಲಿ ನೆಲೆಸಿದ್ದು, ಅವರ ಮನೋವ್ಯಾಪಾರಗಳನ್ನು ನಿಯಂತ್ರಿಸುವವನು. ಕೊನೆಯದಾಗಿ 'ಅರ್ಚ' ಅಥವಾ ಪ್ರತಿಮಾಸ್ವರೂಪಿಯಾಗಿ ತನ್ನ ಭಕ್ತರಿಗೆ ಸುಲಭಲಭ್ಯನಾಗಿದ್ದು, ಅವರಿಂದ ಮನೆ-ಮಂದಿರಗಳಲ್ಲಿ ಧಾರ್ಮಿಕ ಆರಾಧನೆಗಳನ್ನು ಸ್ವೀಕರಿಸುವನು.

ಭಗವಂತನ ಈ ಐದು ಸ್ವರೂಪಗಳಲ್ಲಿ, ಆತನ ಭಕ್ತರು ವಿಶೇಷವಾಗಿ ಬಯಸುವುದು ಆತನ ಪ್ರತಿಮಾ ಸ್ವರೂಪವನ್ನೇ. ಆತನ ಸೌಂದರ್ಯ ಮತ್ತು ತೇಜಸ್ಸನ್ನು ಸವಿದು ಆತನ ಸಾನ್ನಿಧ್ಯವನ್ನು, ಇಲ್ಲೇ ಮತ್ತು ಈಗಲೇ ಅನುಭವಿಸಲು ಅದರಿಂದ ಅನುಕೂಲ ಎಂಬ ನೇರ ಕಾರಣಕ್ಕಾಗಿ. ಅನೇಕ ಕವಿ-ಋಷಿಗಳು ಜಗತ್ತಿನಾಚೆಗಿನ ಶಾಶ್ವತ ಜೀವನಕ್ಕೆ ತೆರಳುವ ಬದಲು, ಈ ನಶ್ವರ ಪ್ರಪಂಚದಲ್ಲಿಯೇ ಮತ್ತೆ ಮತ್ತೆ ಜನ್ಮವೆತ್ತಿ, ತತ್ಫಲವಾಗಿ ಒದಗಿಬರುವ ಭವರೋಗಗಳನ್ನು ನಗು-ನಗುತ್ತಲೇ ಎದುರಿಸಲು ಸಿದ್ಧರಾಗಿರುವ ಇಚ್ಛೆಯನ್ನು ವ್ಯಕ್ತಪಡಿಸಿರುವುದರಲ್ಲಿ ಅಚ್ಚರಿಯೇನಿಲ್ಲ. ಅವರು ನಿರೀಕ್ಷಿಸುವ ಒಂದೇ ಭರವಸೆಯೆಂದರೆ, ಅದು ವಿಷ್ಣುವನ್ನು ಜನ್ಮ-ಜನ್ಮಾಂತರದಲ್ಲಿಯೂ ತಮ್ಮ ಮೆಚ್ಚಿನ ಪ್ರತಿಮಾ-ರೂಪದಲ್ಲಿಯೇ ಹಿಡಿದಿಟ್ಟುಕೊಳ್ಳುವ ಅಮಿತಾನಂದವನ್ನು ಮಾತ್ರ.

ಶಾಸ್ತ್ರವಿಧಿತ ಆರಾಧನೆಗಾಗಿ ಭಕ್ತರು, ವಿಷ್ಣುವಿನ ಪ್ರತಿಮಾ ಹಾಗೂ ಅಮೂರ್ತ ಸ್ವರೂಪಗಳೆರಡನ್ನೂ ಬಳಸಿಕೊಳ್ಳುತ್ತಾರೆ. ಸಾಲಿಗ್ರಾಮವನ್ನು, ಅಮೂರ್ತ ಮತ್ತು ಸಾಂಕೇತಿಕ ರೂಪವೆಂದು ಪರಿಗಣಿಸಿದರೆ, ಪ್ರತಿಷ್ಠಾಪಿಸಿದ ಪ್ರತಿಮೆಯನ್ನು ದೇವರ ಸಾಕಾರ ಮೂರ್ತಿಯೆಂದೂ, ಅದು ಏಕಾಗ್ರತೆಗೆ ಸಾಧನವೆಂದೂ ಒಮ್ಮೆಗೇ ಭಾವಿಸುತ್ತಾರೆ.[3] ವಿಷ್ಣು ಸಂಹಿತೆಯು ವಿಧಿಯುಕ್ತ ಆರಾಧನೆಯ ಶಾಸ್ತ್ರಗ್ರಂಥವಾಗಿದ್ದು, ಅದು ಭಗವಂತನನ್ನು ಧ್ಯಾನಿಸುವುದು ಒಂದು ಆಕೃತಿಯಿಲ್ಲದೆ ದುಸ್ಸಾಧ್ಯವೆಂದೂ, ಹಾಗೆಂದೇ ಬುದ್ಧಿವಂತರು 'ಪ್ರತಿಮಾ ರೂಪವು ನಿಜವಾದುದಲ್ಲ ಕೇವಲ ಪ್ರತೀಕ ಮಾತ್ರ' ಎಂಬ ಅರಿವಿದ್ದರೂ ಸಹಾ ಧ್ಯಾನದ ಉದ್ದೇಶಕ್ಕಾಗಿ ಮೂರ್ತಿಯೊಂದನ್ನು ಆಯ್ಕೆ ಮಾಡಿಕೊಳ್ಳುವರೆಂದೂ ವಿವರಿಸುತ್ತದೆ. ಶ್ರೀ ವೈಷ್ಣವರೆಂದೂ ಹೆಸರಾದ ವಿಶಿಷ್ಟಾದ್ವೈತ ಪಂಥದ ಅನುಯಾಯಿಗಳು ಇನ್ನೂ ಒಂದು ಹೆಜ್ಜೆ ಮುಂದೆಹೋಗಿ, ಮೂರ್ತಿ-ರೂಪವು ಏಕಾಗ್ರತಾ- ಸಾಧನವಷ್ಟೇ ಅಲ್ಲವೆಂದೂ, ಅದು ಭಗವಂತನ ಸಾನ್ನಿಧ್ಯವನ್ನು ಆವಾಹಿಸಿಟ್ಟಿರುವ ಆಕೃತಿಯೆಂದೂ, ಸಾಧಿಸುತ್ತಾರೆ. 'ಸೌಲಭ್ಯ' ಎಂದರೆ ಸುಲಭ-ಸಾಮೀಪ್ಯದಲ್ಲಿಯೇ ಒದಗುವ ಗುಣವು

ಭಗವಂತನ ಲಕ್ಷಣಗಳಲ್ಲೊಂದಾದ್ದರಿಂದ, ಆತನು ತನ್ನ ಭಕ್ತರಿಗೆ ಆರಾಧಿಸಲು ಅನುಕೂಲವಾಗುವಂತೆ, ಮೂರ್ತರೂಪವೊಂದನ್ನು[4] ತಳೆಯುವ ಅನುಗ್ರಹ ಮಾಡುತ್ತಾನೆಂಬುದನ್ನು ಇಲ್ಲಿ ಗಮನಿಸಬೇಕು.

ವಿಷ್ಣುವಿಗೆ, ಇಲ್ಲವೇ, ಆತನ ಜನಪ್ರಿಯ ಅವತಾರಗಳಾದ ರಾಮ ಮತ್ತು ಕೃಷ್ಣ ಇವರಲ್ಲಿ ಒಬ್ಬರಿಗೆ, ಮೀಸಲಾದ ದೇವಾಲಯಗಳು ದೇಶದ ಎಲ್ಲೆಡೆ ಕಾಣಬರುತ್ತವೆ. ಹಾಗೂ ಶ್ರೀ ವೈಷ್ಣವ ಸಾಹಿತ್ಯವು ಅವುಗಳ ಪೈಕಿ 108 ದೇವಾಲಯಗಳನ್ನು ಅತಿ ಪವಿತ್ರವಾದುವೆಂದು ಸಾರುತ್ತದೆ. ಅದರಲ್ಲಿಯೂ, ಶ್ರೀರಂಗಂನ ಶ್ರೀ ರಂಗನಾಥ, ಕಾಂಚೀಪುರದ ಶ್ರೀ ವರದರಾಜ ಮತ್ತು ತಿರುಪತಿಯ ಶ್ರೀ ವೆಂಕಟೇಶ್ವರ ದೇವಾಲಯದ ಮೂರು ಕ್ಷೇತ್ರಗಳು ದಕ್ಷಿಣ ಭಾರತದ ಪ್ರಸಿದ್ಧ ಯಾತ್ರಾ ಸ್ಥಳಗಳಾಗಿದ್ದು, ಈ ಪ್ರದೇಶದಲ್ಲಿ ಅನೇಕ ಯುಗಗಳಿಂದ ವೈಷ್ಣವತ್ವ ಪ್ರಚಾರದ ಪ್ರಮುಖ ಕೇಂದ್ರಗಳಾಗಿ ಸೇವೆ ಸಲ್ಲಿಸಿವೆ. ವೈಷ್ಣವ ಭಕ್ತರು ಈ ದೇವಸ್ಥಾನಗಳಲ್ಲಿನ ಹಾಗೂ ಇನ್ನೂ ಹಲವೆಡೆಗಳಲ್ಲಿನ ಮೂರ್ತಿಗಳು ಸ್ವಯಂ-ವ್ಯಕ್ತ (ಉದ್ಭವ)ವಾದುವೆಂದೂ, ಮಾನವ-ರಚಿತವಲ್ಲವೆಂದೂ ಹಾಗೂ ಅವುಗಳಲ್ಲಿ ಒಂದೊಂದೂ ಭಗವಂತನ ವಿಶಿಷ್ಟ ಅಂಶವನ್ನು ಪ್ರತಿಬಿಂಬಿಸುವುದೆಂದೂ, ದೃಢವಾಗಿ ನಂಬುತ್ತಾರೆ. ಐದು ಹೆಡೆಯ ಸರ್ಪ ಆದಿಶೇಷನ ಮೇಲೆ, ಯೋಗ-ನಿದ್ರಾಭಂಗಿಯಲ್ಲಿ ಒರಗಿರುವ ಶ್ರೀ ರಂಗನಾಥನು ವೈಕುಂಠದ ಶ್ರೀಮಹಾವಿಷ್ಣುವಿನ ಗೋಚರರೂಪನೆಂದೂ; ಶ್ರೀ ವರದರಾಜನು ಶ್ರೀಮನ್ನಾರಾಯಣನ; ಹಾಗೂ ಶ್ರೀ ವೆಂಕಟೇಶ್ವರನು, ಭಗವದ್ಗೀತೆಯ[5] ಚರಮಶ್ಲೋಕವೆಂದು ಶ್ರೀ ವೈಷ್ಣವರು ಸಾರುವ 'ಸ್ವಯಂ - ಶರಣಾಗತಿ' ಸಿದ್ಧಾಂತ ಬೋಧಕನೆಂದೂ ಪರಿಗಣಿತರಾಗಿದ್ದಾರೆ.

ಹಿಂದೂ ಶಿಲ್ಪಶಾಸ್ತ್ರದ ನಿಬಂಧನೆಯ ಪ್ರಕಾರ ವಿಷ್ಣುವಿನ ವಿಗ್ರಹವನ್ನು ನಿಂತ (ಸ್ಥಾನಕ), ಕುಳಿತ (ಆಸನ), ಅಥವಾ ಮಲಗಿರುವ (ಶಯನ) ಭಂಗಿಯಲ್ಲಿ ರೂಪಿಸಬೇಕಾಗುವುದು. ಶ್ರೀ ವೆಂಕಟೇಶ್ವರನು ಸ್ಥಾನಕ ಭಂಗಿಯಲ್ಲಿ ವ್ಯಕ್ತನಾಗಿದ್ದು, ಪದ್ಮ-ಪೀಠದ ಮೇಲೆ ಶೋಭಾಯಮಾನನಾಗಿ ನಿಂತಿರುವನು. ಅಮೂಲ್ಯ ರತ್ನಖಚಿತವಾದ ಸ್ವರ್ಣ ಕಿರೀಟವೊಂದನ್ನು ಧರಿಸಿರುವ ಆತನ ಮೂರ್ತಿಯು ಅನೇಕ ಉಜ್ವಲ ಆಭರಣಗಳಿಂದ ಅಲಂಕೃತಗೊಂಡಿದೆ. ಅವುಗಳಲ್ಲಿ, ಕಿವಿಗೆ ಮೋಹಕ ಕರ್ಣಕುಂಡಲಗಳು, ಕಂಕಣಗಳು, ಕಾಲು ಬಳೆ ಹಾಗೂ ಐದು ಹೆಡೆಗಳು ಹೆಣೆದುಕೊಂಡಿರುವ ಸರ್ಪಾಕೃತಿಯ ತೋಳಬಂದಿಗಳೂ ಸೇರಿವೆ. ಆತನ ಹಣೆಯು, ಅಗಲವಾದ ಪಚ್ಚಕರ್ಪೂರದ ಲೇಪನದಿಂದ ಭಾಗಶಃ ಆವೃತವಾಗಿದ್ದು, ಮಧ್ಯಸ್ಥಾನದಲ್ಲಿ ತೆಳುವಾದ ಉದ್ದನೆಯ ಕಸ್ತೂರಿಯ ಗೆರೆಯಿಂದ ಇಬ್ಭಾಗವಾಗಿದ್ದರೆ; ಆತನ ಕಣ್ಣುಗಳು ಪೂರ್ಣ ಅರಳಿದ ಪದ್ಮದಳಗಳನ್ನು ಹೋಲುತ್ತಾ, ಮೇಲೂ ಅಲ್ಲದ - ಕೆಳಗೂ ಅಲ್ಲದ, ನೇರವಾದ ಸಮದೃಷ್ಟಿಯನ್ನು ತನ್ನನ್ನು ಪೂಜಿಸುವ ಭಕ್ತರ ಮೇಲೆ ಹರಿಸಿವೆ. ಕರುಣಾಪೂರ್ಣ ಕಣ್ಣುಗಳು ಮತ್ತು ತುಟಿಗಳ ಮೇಲಿನ ಮೆಲುನಗೆಯೂ ಸೇರಿ, ಆ ಮುಖವು ಅಪೂರ್ವ ದೈವಿಕ ಸೌಂದರ್ಯದಿಂದ ಪ್ರಜ್ವಲಿಸುವಂತೆ ಮಾಡಿವೆ.

ಶ್ರೀಯು (ಲಕ್ಷ್ಮೀದೇವಿ) ಆತನ ವಕ್ಷಸ್ಥಳದಲ್ಲಿಯೇ ಸದಾ ನೆಲೆಸಿರುವುದರಿಂದ,

ಆತನು 'ಶ್ರೀನಿವಾಸ'ನೆಂದೂ ಹೆಸರಾಗಿದ್ದಾನೆ. ತನ್ನ ಎರಡೂ ಮೇಲಿನ ಕೈಗಳಲ್ಲಿ ಚಕ್ರ ಹಾಗೂ ಶಂಖಾಯುಧಗಳನ್ನು ಧರಿಸಿದ್ದರೆ, ಕೆಳ ಬಲಗೈ ವರದ (ವರದಾನ) ಮುದ್ರೆಯಲ್ಲಿದೆ ಹಾಗೂ ಕೆಳ ಎಡಗೈ, ಮುಂಡಿಯಿಂದ ಸ್ವಲ್ಪ ಮೇಲೆ ಇದ್ದು, ಶಿಲ್ಪಶಾಸ್ತ್ರದಲ್ಲಿ ವರ್ಣಿತವಾಗಿರುವ 'ಕಟ್ಯಾವಲಂಬಿತ' (ಸೊಂಟಾಧಾರದ) ಮುದ್ರೆಯನ್ನು ಹೋಲುವುದು. ಕೆಳ ಕೈಗಳ ಭಂಗಿ ಮತ್ತು ಸ್ಥಾನದ ಮಹತ್ವ ಕುರಿತು ಇನ್ನೂ ಸ್ವಲ್ಪ ವಿವರಣೆಯು ಬೇಕಾಗಿದೆ.

ಶ್ರೀ ವೆಂಕಟೇಶ್ವರನು ತನ್ನ ಭಕ್ತರ ಮೇಲೆ, ಅವರ ನಿರೀಕ್ಷೆಗೂ ಮೀರಿ, ವರಗಳನ್ನು ದಯಪಾಲಿಸುವ ಧಾರಾಳತನಕ್ಕೆ ಪ್ರಸಿದ್ಧನಾಗಿದ್ದು, ಈ ಲಕ್ಷಣವು ಆತನ ಮುಕ್ತವಾದ ಬಲ ಅಂಗೈನಿಂದ ಎದ್ದು ತೋರುತ್ತಿದ್ದು, ಅಲ್ಲಿಂದ ವರಗಳು ಯಾವುದೇ ಅಡೆ-ತಡೆಯಿಲ್ಲದೆ ಹೊರಹೊಮ್ಮುತ್ತವೆ. ಇನ್ನೂ ಹೆಚ್ಚಾಗಿ ಆ ಅಂಗೈ ಆತನ ಪಾದಗಳ ಕಡೆಯೇ ಹೊರಳಿದ್ದು, ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ತನ್ನ ಭಕ್ತರಿಗೆ ನೀಡಿರುವ "ನನ್ನಲ್ಲಿ ಮಾತ್ರವೇ ಆಶ್ರಯವನ್ನು ಕೋರು" ಎಂಬ ಅಂತಿಮ ಸಂದೇಶವನ್ನು, ಪುನಃ ಸಾಂಕೇತಿಕವಾಗಿ ಸೂಚಿಸುತ್ತಿರುವಂತಿದೆ. ಯಾರು ಆತನ ಪಾದಗಳನ್ನು ಬಿಡದೆ ಹಿಡಿಯುವರೋ, ಅವರಿಗೆ ಎಲ್ಲ ಪಾಪಗಳಿಂದ ಬಿಡುಗಡೆಯೂ ತತ್ಫಲವಾಗಿ ಶಾಶ್ವತ ಪರಮಸುಖದ ಪ್ರಾಪ್ತಿಯೂ ಆಗುವುದೆಂಬ ನಂಬಿಕೆಯಿದೆ. ಹಾಗೆಯೇ, ಮೊಣಕಾಲಿಗೆ ಸ್ವಲ್ಪವೇ ಮೇಲಿರುವ ಎಡಗೈ ಭಂಗಿಯೂ ಸಹ, ಐಹಿಕ ಜೀವನದ ಸಮಸ್ಯೆಗಳೆಲ್ಲವೂ ಕೇವಲ ಮೊಣಕಾಲಿನ ಆಳದಷ್ಟು ಮಾತ್ರವಿದೆ ಎಂದು ಶ್ರೀ ವೆಂಕಟೇಶ್ವರನ ಭಕ್ತರಿಗೆ ಸೂಚಿಸಿ, ಆತನು ಆಪತ್ಕಾಲದಲ್ಲಿ ತಪ್ಪದೆಯೇ ಒದಗಿ ಬರುವನೆಂಬ ದೈವಿಕ-ರಕ್ಷಣೆಯ ಭರವಸೆಯನ್ನೂ ನೀಡುವುದಾಗಿದೆ.

'ವೆಂಕಟಾದ್ರಿ' ಎಂದು ಹೆಸರಾದ ಗಿರಿಯ ಮೇಲೆ ವ್ಯಕ್ತನಾಗಿರುವ, ಶ್ರೀ ವೆಂಕಟೇಶ್ವರ ಹಾಗೂ ಆ ಕ್ಷೇತ್ರದ ಉಗಮದ ಕುರಿತು ಸಹಜವಾಗಿಯೇ ಹಲವಾರು ದಂತ ಕಥೆ-ಪುರಾಣಗಳು ಹಬ್ಬಿಕೊಂಡಿವೆ. ಹೀಗಾಗಿ, ಕರ್ತೃವೂ ಕಾಲವೂ ಕರಾರುವಾಕ್ಕಾಗಿ ತಿಳಿಯದ ಗ್ರಂಥಗಳು; ವರಾಹ ಪುರಾಣ, ಬ್ರಹ್ಮಾಂಡ ಪುರಾಣ ಮತ್ತು ಭವಿಷ್ಯೋತ್ತರ ಪುರಾಣಗಳಂತಹ ಸಂಸ್ಕೃತ ಪೌರಾಣಿಕ ಕೃತಿಗಳಲ್ಲಿ, ಅತ್ಯಂತ ವರ್ಣರಂಜಿತವಾಗಿ ನಿರೂಪಿತವಾಗಿರುವ ಸಂಗತಿಗಳ ವಾಸ್ತವತೆ ಹಾಗೂ ಕಾಲ್ಪನಿಕತೆಯನ್ನು ಬೇರ್ಪಡಿಸುವುದು ಅಸಾಧ್ಯವೇ ಆಗಿದೆ.

ಕ್ಷೇತ್ರದ ಕುರಿತಾದ ಮೊತ್ತ-ಮೊದಲ ಪರಿಶೀಲಿಸಬಹುದಾದ ಉಲ್ಲೇಖವು, ಪಾನಂಪರನಾರ್‌ರ 'ಸಿರಪ್ಪಯಿರಾಂ' ಎಂಬ ತಮಿಳು ಭಾಷೆಯಲ್ಲಿನ, ಅತಿ ಪುರಾತನ ಹಾಗೂ ಪ್ರಶಂಸಾರ್ಹ ವ್ಯಾಕರಣ-ಗ್ರಂಥದಲ್ಲಿ ಲಭ್ಯವಿದೆ. ಕ್ರಿ.ಪೂ. 5ನೇ ಶತಮಾನದ 'ತೋಲಕಪ್ಪಿಯಾಂ'ನಲ್ಲಿ ಪ್ರಸ್ತಾಪವಾಗಿರುವುದು 'ವೇಂಗಡಗಿರಿ' ವೆಂಕಟಾದ್ರಿಯೇ ಹೊರತು, ಅಲ್ಲಿ ನೆಲೆ ನಿಂತ ದೈವದ ವಿಚಾರವಲ್ಲ. ಎರಡನೇ ಶತಮಾನದ ಸಂಗಮ ಕವಿ ಮಾಮುಲನಾರ್ ಸಹಾ, ತನ್ನ ಕಾವ್ಯ ಕೃತಿ 'ಅಹನಾನೂರು'ವಿನಲ್ಲಿ, ವೆಂಕಟಾದ್ರಿಯ ಮೇಲೆ ನೆಲೆಸಿದ ವೆಂಕಟೇಶ್ವರನ ಬಗ್ಗೆ ಉಲ್ಲೇಖಿಸದಿದ್ದರೂ, ಅಲ್ಲಿ ನೆರವೇರುವ ಹಬ್ಬ ಜಾತ್ರೆಗಳು,

ಆರಾಧಕರಿಗೆ ದೊರಕುವ ಭಾಗ್ಯದ ಕುರಿತು ವಿವರಿಸುತ್ತಾನೆ. ಅದೇ ಶತಮಾನದ ನಂತರದ ಇಳಂಗೋ ಅಡಿಗಳ್‌ರ ಕಾವ್ಯ ಕೃತಿ, 'ಶಿಲಪ್ಪದಿಗಾರಂ' ವೆಂಕಟಗಿರಿಯ ಕುರಿತು ಮಾತ್ರವಷ್ಟೇ ಅಲ್ಲ, ಅದರ ಮೇಲೆ ನಿಂತಿರುವ ನೀಲವರ್ಣದ ದೈವ, ಶಂಖ-ಚಕ್ರ ಆಯುಧಧಾರಿಯು, ಮಹಾವಿಷ್ಣುವೇ ಎಂದೂ ಖಚಿತವಾಗಿ ಹೇಳುತ್ತದೆ. ಆದರೆ, ಗಿರಿಯ ಪಾವಿತ್ರ್ಯ ಹಾಗೂ ದೈವದ ಮಹಾತ್ಮೆಯ, ಉಲ್ಲಾಸಭರಿತ ಪ್ರಶಂಸೆಯು ಸ್ತೋತ್ರ-ಪದ್ಯಗಳ ರೂಪದಲ್ಲಿ ಲಭ್ಯವಾಗುವುದು, ಖ್ಯಾತ ವೈಷ್ಣವ ಸಂತ-ಕವಿಗಳಾದ ಆಳ್ವಾರರು ಈ ಕ್ಷೇತ್ರವನ್ನು ಪ್ರವೇಶಿಸಿದ ನಂತರವೇ.

'ಆಳ್ವಾರ್' ಪದವು, 'ಮಗ್ನನಾದವನು' ಎಂದು ಅರ್ಥ ನೀಡಿದರೂ, ಪ್ರಸ್ತುತ ಸಂದರ್ಭದಲ್ಲಿ - 'ಲೀನರಲ್ಲಿ ಲೀನ'[6] ಎನಿಸಿಕೊಂಡ ಪರಮಾತ್ಮನಲ್ಲಿ, ಸದಾ ತನ್ಮಯನಾದ ಉತ್ಕಟ ಭಕ್ತನೆಂದು ಸೂಚಿಸುತ್ತದೆ. ಅಂತಹ ಹನ್ನೆರಡು ವಿಷ್ಣು-ಭಕ್ತರು, ಆರರಿಂದ ಒಂಭತ್ತನೇ ಶತಮಾನಗಳ ಅವಧಿಯಲ್ಲಿ, ದಕ್ಷಿಣ ಭಾರತದ ತಮಿಳು ಮಾತನಾಡುವ ಪ್ರದೇಶದಲ್ಲಿ ಜೀವಿಸಿದ್ದು ಅವರನ್ನು 'ಆಳ್ವಾರ'ರೆಂದು ಪರಂಪರಾನುಗತವಾಗಿ ಗುರುತಿಸಲಾಗುತ್ತದೆ. ಸಂತ-ಕವಿಗಳಾಗಿದ್ದ ಅವರಲ್ಲಿ, ಅನೇಕರು ಒಂದು ದೇವಾಲಯದಿಂದ ಇನ್ನೊಂದಕ್ಕೆ ವಿಷ್ಣುಸ್ತುತಿಗಳನ್ನು ಅತ್ಯಾನಂದದಿಂದ ಹಾಡುತ್ತಾ, ಆ ಮೂಲಕ ತಾವು ಹೋದೆಡೆಯಲ್ಲೆಲ್ಲಾ ಭಕ್ತಿ ಪ್ರಸಾರ ಮಾಡುತ್ತಾ ಮತ್ತು ತಮ್ಮ ಹೃದಯ ಸ್ಪರ್ಶೀ ಗೀತೆಗಳಿಂದ ಸಾಹಿತ್ಯವನ್ನು ಸಮೃದ್ಧಗೊಳಿಸುತ್ತಾ, ತಿರುಗಾಡಿದರು. ಅವರು ಸದಾ ದೈವ ಭಕ್ತಿಯ ಅಮಲಿನಲ್ಲಿಯೇ ಅಲೆದಾಡುತ್ತಿದ್ದುದರಿಂದ, ಪ್ರತಿ ವಸ್ತುವೂ-ಪ್ರತಿ ದೃಶ್ಯವೂ ದಿವ್ಯ ದೈವಿಕ ಬೆಳಕಿನಲ್ಲಿ ಅಲಂಕೃತಗೊಂಡಂತೆ ಅವರಿಗೆ ಗೋಚರಿಸಿ, ಅವರು ನಿರ್ಮಲ ಸೌಂದರ್ಯದ ಸ್ತುತಿಗಳ ರೂಪದಲ್ಲಿ ಪರಮಾನಂದದಿಂದ ಹಾಡುವ ಸಂದರ್ಭಗಳಾದುವು. ಕರಿಮುಗಿಲು ಅಥವಾ ಸಾಗರದ ನೀಲ ಜಲದ ನೋಟವನ್ನು ಕಂಡೊಡನೆಯೇ, ಆ ಮುಗಿಲಿನ ಮತ್ತು ಕಡಲಿನ ಬಣ್ಣವು ಅವರಿಗೆ ಪವಿತ್ರ ಕ್ಷೇತ್ರದಲ್ಲಿನ, ಪ್ರತಿಷ್ಠೆಗೊಂಡ ಮೂರ್ತಿಯಂತೆ, ಗೋಚರಿಸಿ ಅವರ ಮನಸ್ಸಿನಲ್ಲಿ ಆ ನೀಲ ವರ್ಣದ ತಿರುಮಲ ದೇವನ ನೆನಪು ಮೂಡಿಸಿ, ಆ ಒಡನೆಯೇ ಭಕ್ತಿಗೀತೆಗಳು ಚಿಲುಮೆಯಂತೆ ಚಿಮ್ಮುತ್ತಿದ್ದುವು. ಹೀಗಾಗಿ, ಆತನ ಹಿರಿಮೆ-ಮಹಿಮೆಗಳ ಕುರಿತು ನಾಲ್ಕು ಸಾವಿರದಷ್ಟು ಪದ್ಯಗಳನ್ನು ಅವರು ಬರೆದುದು ಅಚ್ಚರಿಯೇನಲ್ಲ. ತಮಿಳಿನಲ್ಲಿರುವ ಈ ರಚನೆಗಳನ್ನು, 'ನಾಲಾಯಿರಂ' (ನಾಲ್ಕು ಸಾವಿರ) ಅಥವಾ 'ದಿವ್ಯ ಪ್ರಬಂಧಂ' (ದೈವಿಕ ರಚನೆ) ಎಂಬ ಹೆಸರಿನ ಸಂಪುಟದಲ್ಲಿ ಶ್ರೀ ವೈಷ್ಣವ ಗುರುವಾದ ನಾದಮುನಿಯು ಶ್ರದ್ಧೆಯಿಂದ ಸಂಗ್ರಹಿಸಿದ್ದು, ಅವುಗಳನ್ನು ಇಂದಿಗೂ ಸಂಸ್ಕೃತದ ವೇದ ಶ್ಲೋಕಗಳೊಡನೆ, ದಕ್ಷಿಣ ಭಾರತದ ಎಲ್ಲ ಪ್ರಮುಖ ವಿಷ್ಣು ದೇವಾಲಯಗಳಲ್ಲೂ, ಪ್ರತಿದಿನವೂ ಹಾಡಲಾಗುತ್ತಿದೆ.

ವೈಷ್ಣವರು ಆಳ್ವಾರರಿಗೆ ಎಷ್ಟು ಉನ್ನತ ಗೌರವವನ್ನು ನೀಡುತ್ತಾರೆಂದರೆ, ಅವರು ಹಾಡಿರುವ ಎಲ್ಲ 108 ಕ್ಷೇತ್ರಗಳನ್ನೂ ದಿವ್ಯ ಸ್ಥಳಗಳೆಂದು ಪರಿಗಣಿಸುತ್ತಾ, ತಮಿಳಿನಲ್ಲಿ ಅವುಗಳನ್ನು 'ಪದಾಲ್ ಪೆಟ್ರಪಡಿಗಳ್' (ಪದ್ಯ ಹೇಳಿಸಿಕೊಂಡ ಪುಣ್ಯ ಕ್ಷೇತ್ರಗಳು) ಎನ್ನುತ್ತಾರೆ. ವೈಕುಂಠ ಮತ್ತು ಕ್ಷೀರ ಸಮುದ್ರ-ಈ ಎರಡು ಮಾತ್ರ

ದೇವಲೋಕದವಾಗಿದ್ದು, ಉಳಿದದ್ದೆಲ್ಲವೂ ಭೂಮಿಯ ಮೇಲೇ ನೆಲೆಗೊಂಡಿವೆ. ಅವುಗಳಲ್ಲಿ, ತಿರುಪತಿಗೆ ಪ್ರಾಧಾನ್ಯತೆ ದೊರಕಿರುವುದು, ಆಳ್ವಾರರು ಈ ಕ್ಷೇತ್ರಕ್ಕೆ ಯಾತ್ರೆ ಕೈಗೊಂಡರೆಂಬ ಮಹತ್ವದ ಕಾರಣಕ್ಕಾಗಿ ಹಾಗೂ ಅವರಲ್ಲಿ ಹತ್ತು ಮಂದಿಗೆ ಕಡಿಮೆಯಿಲ್ಲದಂತೆ, ವೆಂಕಟಗಿರಿಯ ದೊರೆಯನ್ನು ಆನಂದಭರಿತವಾಗಿ ಸ್ತುತಿಸಿದ್ದಾರೆ.

ಅನ್ನಮಾಚಾರ್ಯರು ಎರಡು ಕಾರಣಕ್ಕಾಗಿ ಆಳ್ವಾರರ ಗೀತೆಗಳ ಬಗೆಗೆ ವಿಶೇಷ ಪರಿಚಯ ಹೊಂದಿದ್ದರು: ಮೊದಲನೆಯದಾಗಿ, ನಂತರದ ದಿನಗಳಲ್ಲಿ ತಾವೇ ಸ್ವತಃ "ಆಳ್ವಾರ್" (ದೈವ ಭಕ್ತಿಯಲ್ಲಿ ತಲ್ಲೀನನಾದವ) ಎಂದು ಕರೆಯಿಸಿಕೊಂಡುದಲ್ಲದೆ ಅಪರ ಅನುಭಾವದಲ್ಲೂ ಭಾಗಿಯಾದರು; ಹಾಗೂ ವಿಷ್ಣುವಿನ ಕುರಿತಾದ ಭಕ್ತಿಗೀತೆಗಳ ರಚಕ ಗಾಯಕರಾಗಿ, ಪ್ರಸಿದ್ಧರಾದ ತಮ್ಮ ಪೂರ್ವಿಕ ಕವಿಗಳು ಅದೇ ವಸ್ತುವಿನ ಕುರಿತಾಗಿ ರಚಿಸಿದ್ದ ಹಾಡುಗಳಿಂದ ಸಹಜವಾಗಿಯೇ ಆಕರ್ಷಿತರಾದರು. ಎರಡನೆಯದಾಗಿ: ವೈಷ್ಣವ ಮತದ ವಿಶಿಷ್ಟಾದ್ವೈತ ತತ್ವದ ಪ್ರಮುಖ ಪ್ರತಿಪಾದಕರಾದ ರಾಮಾನುಜರು "ಭಗವಂತನ ಅಸ್ತಿತ್ವದ ನಿಜವಾದ ಸಾಕ್ಷ್ಯವೆಂದರೆ ಭಗವಂತನಲ್ಲಿಯೇ ಇರುವುದು" ಎಂದು ಸಮರ್ಪಕವಾಗಿ ಚಿಂತಿಸಿದುದಲ್ಲದೆ, ಆಳ್ವಾರರ ನುಡಿಗಳು ವೇದಗಳಲ್ಲಿನ ಭಗವಂತನ ಪದದಷ್ಟೇ ಸರಿಸಮಾನವಾಗಿ ಸಾಧಾರಯುಕ್ತವಾದುದೆಂದು ಒಪ್ಪಿದ್ದರು - ಈ ಮತಕ್ಕೆ ಪರಿವರ್ತನೆ ಹೊಂದಿದವರಾಗಿ, ಅನ್ನಮಾಚಾರ್ಯರು 'ದಿವ್ಯ ಪ್ರಬಂಧಂ'ವನ್ನು ಭಾಗಶಃ ಆಧರಿಸಿದ, ಅದರ ವೇದಾಂತದ ಅಧ್ಯಯನಕ್ಕಾಗಿ ಹಲವಾರು ವರ್ಷಗಳನ್ನು ಮೀಸಲಿರಿಸಿದ್ದರು. ವಾಸ್ತವವಾಗಿ, ಈ ಕೃತಿಯು ವೇದಗಳ ಸಾರವೆಂದು ಪರಿಗಣಿತವಾಗಿ ಶ್ರೀ ವೈಷ್ಣವರಿಂದ 'ದ್ರಾವಿಡ ವೇದ' ಅಥವಾ 'ಪಂಚಮ ವೇದ' ಎಂದು ಕರೆಯಿಸಿಕೊಂಡಿತು. ಹೀಗಾಗಿ ಅನ್ನಮಾಚಾರ್ಯರನ್ನು ಅವರ ಮೊಮ್ಮಗನೇ 'ಪಂಚಾಗಮ ಸಾರ್ವಭೌಮ'ನೆಂಬ ಅಭಿದಾನದಿಂದ ಸಂಬೋಧಿಸಿರುವುದು ಮಹತ್ವಪೂರ್ಣವಾಗಿದೆ.

ಅನ್ನಮಾಚಾರ್ಯರು ಸೇರ್ಪಡೆಗೊಂಡ, ಪರಿಪೂರ್ಣ ಶ್ರೀ ವೈಷ್ಣವ ಭಕ್ತಿಗೀತಾ ಪರಂಪರೆಯನ್ನು ಅರ್ಥ ಮಾಡಿಕೊಳ್ಳಲು, ತಿರುಪತಿ ಮತ್ತು ಶ್ರೀ ವೆಂಕಟೇಶ್ವರನ ಬಗೆಗಿನ, ಆಳ್ವಾರರ ಕೆಲ ಪದ್ಯ-ಗೀತೆಗಳ ತುಸು ಪರಿಚಯವಾದರೂ ಅತ್ಯಗತ್ಯ. ಹಾಗೂ ವಿಷ್ಣು-ಮಹಾತ್ಮೆಯ ಭವ್ಯ ವಿಚಾರದಲ್ಲಿ, ಆ ಅನುಭಾವಿ ಕವಿಗಳ ಚಿಂತನಾ ವಿಧಾನ ಮತ್ತು ಭಾವನಾತ್ಮಕ ಸ್ಪಂದನಗಳ ಕುರಿತಾದ ತುಲನೆಗೂ ಇದರಿಂದ ಅನುಕೂಲವಾಗುತ್ತದೆ.

ಭಗವಂತನು ಹೇಗೋ ಹಾಗೆಯೇ ಅವನ ಭಕ್ತರು. ಅತಿಶಯವೇ ವಿಷ್ಣು ಭಕ್ತರ ಚಟುವಟಿಕೆಗಳ ಗುಣಲಕ್ಷಣವಾಗಿರಬೇಕಾದುದು ನಿಯಮ. ತಿರುಪತಿ ಬೆಟ್ಟ ಹಾಗೂ ಅದರ ಮೇಲಿನ ದೇವಾಲಯದ ಬಗೆಗೆ ನೇರ ಪ್ರಸ್ತಾಪವಿರುವ 197ರಷ್ಟು ಅಧಿಕ ಸಂಖ್ಯೆಯ ಸ್ತುತಿಗಳನ್ನು ವಿದ್ವಾಂಸರು 'ದಿವ್ಯ ಪ್ರಬಂಧಂ'ನಲ್ಲಿ ಗುರುತಿಸಿದ್ದಾರೆ. ಅವುಗಳಲ್ಲಿ ಬಹುತೇಕ, ಗಿರಿಯ ಪಾವಿತ್ರ್ಯವನ್ನು ಹೊಗಳುತ್ತವೆ ಹಾಗೂ ಪ್ರಾಸಂಗಿಕವಾಗಿ ಅದರ ನಿಸರ್ಗ ಸೌಂದರ್ಯವನ್ನು ಬಣ್ಣಿಸುತ್ತವೆ. ಅವು ಶ್ರೀ ವೆಂಕಟೇಶ್ವರನು ಹಾಲಗಡಲಲ್ಲಿ 'ಶೇಷ' ಎಂಬ ಹೆಸರಿನ ಹಾವಿನ ಮೇಲೆ ಪವಡಿಸಿರುವ ವಿಷ್ಣುವಲ್ಲದೆ ಬೇರೆ ಯಾರೂ ಅಲ್ಲವೆಂದು ಖಚಿತಪಡಿಸುತ್ತವೆ. ಅಲ್ಲದೆ ಪುಣ್ಯ ಪುರುಷರು ಹಾಗೂ ಪಾಪಾತ್ಮರಿಗೆ

ಒಂದೇ ಸಮನಾಗಿ, ಪ್ರತಿಮಾರೂಪದಲ್ಲಿ ದಯಾಪೂರ್ಣ ದರ್ಶನಸೌಲಭ್ಯವನ್ನು ಒದಗಿಸುವವನೆಂದೂ, ಹೊಗಳುತ್ತವೆ. 'ಸಖೀ-ಪ್ರೇಮವು' ಪುನಃ -ಪುನಃ ಪ್ರಸ್ತಾಪಿತವಾಗುವ ವಿಷಯವಾಗಿದ್ದು, ಅದು ಹನ್ನೆರಡು ಮಂದಿ ಆಳ್ವಾರರ ಪೈಕಿ ಏಕಮಾತ್ರ ಮಹಿಳೆಯಾದ ಆಂಡಾಳ್ ಅವರ ಹಲವು ಗೀತೆಗಳಲ್ಲಿಯೇ ಅಲ್ಲದೆ, ಆ ಗುಂಪಿನ ಇನ್ನೂ ಹಲವರ ರಚನೆಗಳಲ್ಲಿಯೂ ಶೋಭಾಭಿವ್ಯಕ್ತಿಯನ್ನು ಪಡೆದಿದೆ.

ಕಬ್ಬಿನ ರಸವು ಸಕ್ಕರೆಯ ಅಚ್ಚಿನಲ್ಲಿ ಹರಳುಗಟ್ಟುವಂತೆ, ಶ್ರೀನಿವಾಸನ ಉಕ್ಕಿ ಹರಿಯುವ ಅನುಕಂಪವು ವೆಂಕಟಗಿರಿಯ ರೂಪದಲ್ಲಿ ಗಟ್ಟಿಗೊಂಡಿದೆಯೆಂದು ಸೂಕ್ತವಾಗಿ ವರ್ಣಿಸಲ್ಪಟ್ಟಿದೆ.[8] ಯಾತ್ರಿಕರ ಪಾಪರಾಶಿಯನ್ನು ನಾಶಮಾಡಬಲ್ಲ ಸಾಮರ್ಥ್ಯಕ್ಕಾಗಿ, ಈ ಗಿರಿಯನ್ನು ಅತಿ ಪುರಾತನ ಕಾಲದಿಂದ ಅರಸಲಾಗುತ್ತಿದೆ. ಈ ನಂಬಿಕೆಗೆ ಸಾಕಷ್ಟು ಉಲ್ಲೇಖಗಳು ಆಳ್ವಾರರ ಸ್ತುತಿಗಳಲ್ಲಿವೆ. ಉದಾಹರಣೆಗೆ, ಅವರಲ್ಲಿ ಮೊದಲಿಗರಾದ ಪೊಯಿಗೈ ಆಳ್ವಾರರು ಹೇಳುತ್ತಾರೆ:-

ಬಯುಸುವರಾರೋ ಭೌತಿಕ ಸಿರಿಯ
ಅರಸುವರಾರೋ ಆತ್ಮದ ಅರಿವ
ಇರಿಸಿಹರಾರೋ-ಸಿಂಗರಿತನಾದದೊರೆಯೋರ್ವನೇ ಹಾರಗಳಿಂ
ಆಸರೆಯು ತಮಗೆಂಬ-ಭರವಸೆಯು,

ಆ ತೆರನ ಜೀವರೆಲ್ಲರ
ದುರಿತದುರಿಯುನು ದೂರಾಗಿಸುವ
ಗಿರಿಯು, ತಾ ವೆಂಕಟಾದ್ರಿಯೊಂದೇ,
ಮುಕ್ತ ಜೀವರ ಹೃದಯವನು ಬೆಳಗುವುದದು
ಮತ್ತವರನು ಸ್ವರ್ಗದಿಂದಲೇ ಸೆಳೆಯುವುದು.

ಮೂರು ಬಗೆಯ ಸಾಧಕರ ಬಗ್ಗೆ ಪದ್ಯದಲ್ಲಿ ಪ್ರಸ್ತಾಪಿಸಲಾಗಿದೆ:

ಈ ಭುವಿಯಾಚೆಗಿನ ಏನೊಂದನ್ನೂ ಬಯಸದ, ಭೌತ ಅಥವಾ 'ಪ್ರಾಪಂಚಿಕಜೀವಿ.' ಭಗವಂತನೆಂದರೆ ವಿದ್ವತ್ತು ಮತ್ತು ತರ್ಕಗಳಿಂದ ಮಾತ್ರವೇ ಗ್ರಹಿಸಬೇಕಾದ ಒಂದು ಪರಿಕಲ್ಪನೆ ಎಂದು ತಿಳಿದ 'ಬುದ್ಧಿಜೀವಿ.' ಹಾಗೂ ಅಲಂಕಾರ ಪ್ರಿಯನೂ, ಆರಾಧನೆಯ ಅಂಗವಾಗಿ ಮಾಲಾದಿಗಳನ್ನು ಧರಿಸಿದ ದೇವನೂ ಆದ ವಿಷ್ಣುವಿಗೆ ಸ್ವಯಂಶರಣಾಗಲು ಹಂಬಲಿಸುವ 'ಭಕ್ತಜೀವಿ.' ಹಿಂದೂ ಪುರಾಣದ, ಬಯಸಿದುದನ್ನು ನೀಡುವ, ಕಲ್ಪವೃಕ್ಷದಂತೆ ಪ್ರತಿಯೊಬ್ಬನಿಗೂ ಕೋರಿದುದನ್ನು ಕರುಣಿಸಲು ಸಿದ್ಧನಾಗಿರುವ ಹಾಗೆ ಭಗವಂತನು ಭವ್ಯವಾಗಿ ನಿಂತಿದ್ದಾನೆ. ವೆಂಕಟಗಿರಿಯಾದರೋ ಅವರ ಪಾಪಗಳನ್ನು ಮೊದಲಿಗೇ ನಾಶಗೊಳಿಸಿ, ಈ ಕಾರ್ಯವನ್ನು ಸುಗಮಗೊಳಿಸುವುದು.

ಈ ಪವಿತ್ರ ಗಿರಿಯ ಸ್ಮರಣೆಯಿಂದ ಮಾತ್ರವೇ, ಸ್ವರ್ಗದಲ್ಲಿನ ಸ್ಥಾನವು ಶತಸ್ಸಿದ್ಧವೆಂದು ತಿರುಮಳಿಶೈ ಆಳ್ವಾರರು ಘೋಷಿಸುತ್ತಾರೆ.

ವೆಂಕಟಾದ್ರಿಯನೇ ಕುರಿತು ಹಾಡುವೆ-
'ಗಿರಿ' ಎಂಬ ಪದವ ಕೇಳಿದಾಗೆಲ್ಲ,
ಚಿರ-ನಿಲಯುವ ಎನಗೆಂದೇ ಪಡೆವೆ.

ನನ್ನ ಭಕುತಿಯ ಜಾಲದಲಿ
ಲಕುಮೀ ವಲ್ಲಭನ ಹಿಡಿದಿಡುವೆ
ನಾನಾತನ ಅಡಿಗಳಲೇ ಸೆರೆಯಾಗಿಬಿಡುವೆ.

ಗಿರಿಯನ್ನು ಸಂದರ್ಶಿಸಬೇಕೆಂಬ ಉತ್ಕಟ-ಹಂಬಲವನ್ನು ತಮ್ಮ ಮತ್ತೊಂದು ಪದ್ಯವಲ್ಲಿ ಹೃದಯಸ್ಪರ್ಶಿಯಾಗಿ ತೋಡಿಕೊಳ್ಳುತ್ತಾ, ಅಂಥ ಸುದಿನವು ಬರುವವರೆಗೂ ಗಿರಿಯ ಚಿತ್ರವೊಂದನ್ನು ಬರೆದು, ಅದನ್ನೇ ದಿಟ್ಟಿಸಿನೋಡುತ್ತಾ ಸಮಾಧಾನಪಟ್ಟುಕೊಳ್ಳುವುದಾಗಿ ವಿವರಿಸಿದ್ದಾರೆ:

ದೇವ ವೇಂಗಡನ
ಸೇವೆಗವಕಾಶ ನೀಡೆಂದು
ಅವನನೇ ಬೇಡುವೆನು

ಎಲ್ಲಿ, ಸುರಿವ ಮಳೆಯಿಂದ
ತೊರೆಗಳವು ಉಕ್ಕುಕ್ಕಿ ಹರಿಯುವುವೋ;
ಎಲ್ಲಿ, ರತುನ ಮಣಿಗಳಿಂದಲಿ ಸೇರಿ
ಎತ್ತರದಿಂ, ಧುಮ್ಮುಕ್ಕಿ ಸುರಿಯುವುವೋ;

ಎಲ್ಲಿ, ಹೆದರಿ-ಬೆದರಿದ ಕರಿಯು
ಸರಿ-ದಾರಿಗಾಣದೆ ತಿರುಗಾಡುತಲಿ
ಘಟಸರ್ಪವೊಂದಕೆ ತಾ ಸೆರೆಯಾದುದೋ;

ಅಂಥ ಗಿರಿಯನು ನಾ ಸೇರಬಯುಸುವೆನೋ
ಆವರೆಗೆ, ಗಿರಿಯದರ ಚಿತ್ರ - ಚಿತ್ತಾರವನು
ಮರಳಿನಲಿ ಬರೆ-ಬರೆದು,
ನಿರುತವೂ ನೋಡುತಿರುವೆನೋ.

ಇನ್ನೊಬ್ಬ ಆಳ್ವಾರರಾದ ಕುಲಶೇಖರರು ಕೂಡಾ, ಇದೇ ವಿಷಯದ ಮೇಲಿನ ತಮ್ಮ ಗೀತ-ಗುಚ್ಛಗಳಲ್ಲಿ ಈ ಭಾವವನ್ನೇ ಪುನರುಚ್ಚರಿಸುತ್ತಾ, ಪಾಂಚಜನ್ಯವೆಂಬ ಶಂಖವನ್ನು ತನ್ನ ಕೈಯ್ಯೊಂದರಲ್ಲಿ ಧರಿಸಿರುವ ಪರಮಾತ್ಮನಿಂದ ಪಾವನಗೊಂಡಿರುವ ಗಿರಿಯ ಮೇಲೆ ಒಂದು ಹಕ್ಕಿಯೋ, ಮೀನೋ, ಗಿಡವೋ, ಮರವೋ ಇಲ್ಲವೇ ಒಂದು ಕಲ್ಲು ಬಂಡೆಯೋ, ಆಗಿ ಹುಟ್ಟಿದರೂ, ತಮ್ಮ ಜನ್ಮವು ನಿಜವಾಗಿ ಧನ್ಯವಾಗುವುದೆಂದು ಹೇಳುತ್ತಾರೆ.

ಮೇಲಿನ ಲೋಕಗಳ
ಒಡೆತನವ ನಾನೊಲ್ಲೆ
ಬೇಡೆನಗೆ, ನಾಕಲೋಕದ[9]
ಬೆಡಗಿ ಊರ್ವಶಿಯ ಕೊಡುಗೆ.

ಬಂಗಾರಗಿರಿ ವೆಂಕಟಾದ್ರಿಯ ಮೇಲೆ
ತೃಣ-ಕಣವಾದರೂ ಸಾಕೋ
ಹವಳ-ತುಟಿಗಳ ಪರಮಾತ್ಮನ ಬಳಿಯೇ
ನಾ ನೆಲೆ ನಿಲ್ಲಬೇಕೋ.

ಬೇರೆ ಬಗೆ-ರೂಪಗಳಲ್ಲಿ ದುರ್ಲಭನಾಗಿರುವ ವಿಷ್ಣುವು, ಶ್ರೀ ವೆಂಕಟೇಶ್ವರನ ಮೋಹಕ ರೂಪದಲ್ಲಿ, ತಿರುಪತಿ ಗಿರಿಯ ಮೇಲೆ ಸುಲಭ-ಲಭ್ಯವಾಗಿರುವನು. ಆ ಗಿರಿಯಾದರೋ, ತನ್ನ ಹೆಸರಿನ ಉಚ್ಚಾರಣೆ ಮಾತ್ರದಿಂದಲೇ, ಕವಿ-ಮುನಿಗಳನ್ನು ಆನಂದಾವೇಶಕ್ಕೆ ಒಯ್ಯುತ್ತದೆ. ವಿಶಿಷ್ಟಾದ್ವೈತ ವೇದಾಂತದ ಪ್ರಕಾರ, ಭಗವಂತನು ಒಮ್ಮೆಗೇ ತನ್ನ 'ಪರತ್ವ' (ಸಂಪೂರ್ಣ ಸರ್ವೋತ್ತಮತ್ವ) ಹಾಗೂ 'ಸೌಲಭ್ಯ' (ದಯಾಪೂರ್ಣ ಸಾಮೀಪ್ಯ)[10]ಗಳಿಂದಲೇ ವಿಶಿಷ್ಟನಾಗಿದ್ದಾನೆ. ರಾಮಾನುಜರು ಹೇಳಿದರೆನ್ನಲಾದ ದೃಷ್ಟಾಂತವೊಂದು ಈ ಎರಡೂ ಗುಣಲಕ್ಷಣಗಳ ಪಾತ್ರವನ್ನು ನೇರವಾಗಿ ನಿರೂಪಿಸುತ್ತದೆ. ಕುಂಟನೊಬ್ಬನಿಗೆ ಆನೆಯ ಮೇಲೆ ಹತ್ತಿ ಕೂಡುವುದು, ಹಾಗೆ ಮಾಡೆಂದು ಹೇಳಿದರೂ ಸಹಾ, ಹೇಗೆ ಸಾಧ್ಯವಿಲ್ಲವೋ ಹಾಗೆ, ಈ ಅಪರಿಪೂರ್ಣ ಲೋಕದ ನಿಕೃಷ್ಟ ಜಂತುವು ಆ ಸರ್ವೋತ್ತಮ-ಶಕ್ತಿಯನ್ನು ತಾನಾಗಿಯೇ ತಲುಪುವುದು ಸಾಧ್ಯವಿಲ್ಲ. ಆದರೆ ಆನೆಯು, ತಾನಾಗಿಯೇ ಮಂಡಿಯೂರಿ ಕುಳಿತು, ತನ್ನನ್ನು ಹತ್ತಲು ಕುಂಟನಿಗೆ ಸಹಾಯಕವಾಗುವಂತೆ, ಭಗವಂತನೇ ಭೂಮಿಯಲ್ಲಿ ಅವತಾರವೆತ್ತಿ ಅಥವಾ ಮೂರ್ತಿರೂಪವನ್ನು ತಳೆದು, ಇಳೆಗೆ ಇಳಿದು ಬಂದು ತನ್ನ ಭಕ್ತರಿಗೆ ಸಾಮೀಪ್ಯವನ್ನೊದಗಿಸುವನು. ಈ ಎರಡು ಬಗೆಗಳ ಪೈಕಿ, ಸಾಕಾರವಾದ ಮೂರ್ತಿ-ರೂಪವು ಅತ್ಯಂತ ಪ್ರೀತಿ-ಪಾತ್ರವಾಗಿ ಇಷ್ಟಪಡುವಂಥದು. ಕಾರಣ, ಅವತಾರ ರೂಪವು ಕೇವಲ ನಿರ್ದಿಷ್ಟ ಉದ್ದೇಶ-ಸಾಧನೆಗಾಗಿ, ಸೀಮಿತ ಕಾಲಾವಧಿಯಲ್ಲಿ ಮಾತ್ರ ತಳೆಯುವಂಥದ್ದಾದರೆ, ಪ್ರತಿಮಾರೂಪವು ಭಕ್ತರಿಗೆ ಒಂದು ತೆರನಾದ ಶಾಶ್ವತತೆಯನ್ನೂ, ನೋಡಬಲ್ಲ ನೈಜತೆಯನ್ನೂ ತಾಳುತ್ತದೆ. ಈ ಭಾವವು, ಪೊಯಿಗೈ ಆಳ್ವಾರರ ಪದ್ಯವೊಂದರಲ್ಲಿ ಚೆನ್ನಾಗಿ ವ್ಯಕ್ತವಾಗಿದೆ.

ಭೂಮಿಯನವನು ಬಿಡಿಸಿದನು
ಬೆಟ್ಟವ ತಾನು ಹಿಡಿದೆತ್ತಿದನು,
ಕಂಪಿತ ಕಂಸನನು ಕೆಡಹಿದನು
ಅನಂತ ಜಲರಾಶಿಯ
ಕಡಲಲಿ, ತಾ ಪವಡಿಸಿಹನು
ವೆಂಕಟಾಚಲದಲಿ ಮಾತ್ರವೇ

ಅಲುಗಾಡದೆಯೆ ನಿಂತುಕೊಂಡಿಹನು
ಛಾಯೆಯಲಿ ತಾನಾವರೋ
ನೀಲಗಡಲ ಹೋಲಿಕೆಯನೇ ಪಡೆದಿಹನು

ಭೂದೇವಿಯನ್ನು ಅಕಾಲ ಪ್ರಳಯದಿಂದ ರಕ್ಷಿಸಲು ವರಾಹಾವತಾರವನ್ನು ತಾಳಿದ; ಕೃಷ್ಣನಾಗಿ ಗೋವರ್ಧನ ಗಿರಿಯನೆತ್ತಿದ; ಕಂಸನನ್ನು ಸಂಹಾರ ಮಾಡಿದ. ಈ ಸಾಹಸ ಕೃತ್ಯಗಳನ್ನು ನೋಡುವುದು ಆ ಎರಡು ಅವತಾರಗಳ ಯುಗದಲ್ಲಿ ಜೀವಿಸುವ ಸುಯೋಗ ಹೊಂದಿದ್ದ ಜನರಿಗೆ ಮಾತ್ರ ಸಾಧ್ಯವಾಯಿತು.

ನಮ್ಮಾಳ್ವಾರ್ ಅವರೂ ಕೂಡ, ವಿಷ್ಣುವಿನ ಪ್ರಸಿದ್ಧ ದಶಾವತಾರಗಳ ಪೈಕಿ ಕೃಷ್ಣ ಮತ್ತು ವಾಮನ ಈ ಎರಡು ಅವತಾರಗಳೊಂದಿಗೆ, ಶ್ರೀ ವೆಂಕಟೇಶ್ವರನನ್ನು ಹೋಲಿಸುತ್ತಾ, ವೆಂಕಟಗಿರಿಯು ಯಾತ್ರಿಕರನ್ನು ಎಲ್ಲ ಸಂಕಟಗಳಿಂದ ಮುಕ್ತಗೊಳಿಸುವುದೆಂಬ ಆಶ್ವಾಸನೆಯನ್ನು ನೀಡುವರು.

ದೇವನಾವನು
ಸ್ವರ್ಗದಿಂದಿಳಿದು
ಬಂದು ನೆಲೆಸಿಹನೋ,
ದೇವನಾವನು
ಹಿಂದೆ ಗಿರಿಯನೆತ್ತಿ
ಗೋವು-ಗೋವಳರನು
ಸುರಿವ ಮಳೆಯಿಂದ ಸಲಹಿದನೋ,
ದೇವನಾವನು, ತನ್ನ
ಚರಣದಿಂದಲೇ
ಲೋಕವೆಲ್ಲವ ಅಳೆದನೋ,
ದೇವನಂಥವನು ನಿಂತಿರುವ
ವೆಂಕಟಗಿರಿಯ ಮೊರೆ ಹೊಕ್ಕರೆ
ಸಂಕಟವೆಲ್ಲವು ಕರಗುವುವೋ

ಪುರಾಣವು ಹೇಳುವಂತೆ, ಒಂದು ಸಂದರ್ಭದಲ್ಲಿ ಲಕ್ಷ್ಮಿಯು ಕೋಪದಿಂದ ತನ್ನ ದೈವಿಕ-ಸಂಗಾತಿಯನ್ನು ತೊರೆದು, ಸ್ವರ್ಗದಿಂದಿಳಿದು ಭೂಮಿಗೆ ಬಂದಳು. ವಿಷ್ಣುವು ಕೂಡ ಅವಳ ಅಗಲಿಕೆಯ ನೋವನ್ನು ತಾಳಲಾರದೆ, ತಾನೂ ವೈಕುಂಠವನ್ನು ಬಿಟ್ಟು ಭೂಮಿಗೆ ಇಳಿದು ಬಂದು, ವೆಂಕಟಾದ್ರಿಯ ಮೇಲೆ ನೆಲೆ ನಿಲ್ಲ ಬಯಸಿದನು. ಸ್ವರ್ಗದಲ್ಲಿಯೇ ಸದಾ ನೆಲಸಿರುವ ಮುಕ್ತಾತ್ಮರೂ ಸಹಾ, ಭಗವಂತನು ಅಲ್ಲಿಗಿಂತ ಇಲ್ಲಿಯೇ ಸುಲಭವಾಗಿ ಲಭ್ಯನಿರುವನೆಂಬ ಕಾರಣದಿಂದ, ತಿರುಪತಿಯಲ್ಲಿಯೇ ಅವನನ್ನು ಆರಾಧಿಸಲು ಬರುತ್ತಿರುವರೆಂದು, ಆಳ್ವಾರರು ಮತ್ತೆ ಮತ್ತೆ ಸಾರುತ್ತಾರೆ.

ನಮ್ಮಾಳ್ವಾರ್ ಅವರಿಗಾದರೋ, ವೆಂಕಟಾದ್ರಿಯ ದೇವನು ದಿವ್ಯ

ವೈಭವೋಪೇತನಾದ ಕೃಷ್ಣನೇ. ಗೋವುಗಳನ್ನೂ, ಗೋಕುಲದ ಸಾಮಾನ್ಯ ಜೀವಿಗಳನ್ನೂ ರಕ್ಷಿಸಲೆಂದು ತನ್ನ ಕಿರುಬೆರಳಿನಿಂದಲೇ ಗೋವರ್ಧನ ಗಿರಿಯನೆತ್ತಿದ, ತನ್ಮೂಲಕ ಮದಿಸಿದ ಇಂದ್ರನಿಗೆ ಬುದ್ಧಿ ಕಲಿಸುವ ಸಾಹಸವನ್ನು ಮಾಡಿದ, ಗೋಪಾಲರ ನಾಯಕ. ಆದರೆ ಕೃಷ್ಣನು ಚಂದ್ರನಿಗಾಗಿ ಹಂಬಲಿಸಿ, ಹಠಹಿಡಿದ ಮುಗ್ಧ ಮುದ್ದು ಮಗು ಕೂಡಾ. ತಮ್ಮ ಒಂದು ಸುಂದರ ಪದ್ಯದಲ್ಲಿ ಪೆರಿಯಾಳ್ವಾರ್‌ರು ಮಾತೃವಾತ್ಸಲ್ಯಭಾವದ ದೃಶ್ಯವೊಂದನ್ನು ಹಿಡಿದಿಡುತ್ತಾ, ಆ ದೇವಗೋವಳನ ಸಾಕು ತಾಯಿಯಾದ ನಿಷ್ಕಳಂಕ-ಮೂರ್ತಿ, ಯಶೋದೆಯೇ ತಾವಾಗಿಬಿಡುತ್ತಾರೆ.

ಸುತ್ತಮುತ್ತಲು ಬೆಳಕು ಚೆಲ್ಲುವ
ಚೆಲುವ, ಓ ಪೂರ್ಣ ಚಂದಿರನೆ
ನೀ ಸಮನಲ್ಲ-ಸರಿದೊರೆಯಲ್ಲ
ನನ್ನೀ ಮುದ್ದು ಕಂದನ ಮೊಗದ ಚಂದಕೆ,
ವೆಂಕಟಾಚಲದ ಮೇಲೆ ನೆಲೆಸಿಹ
ನನ್ನ ನಲ್ಮೆಯ ನಂದನನು
ತನ್ನ ಕಣ್ಸನ್ನೆಯಿಂದಲೇ
ಕರೆದಿಹನು ನಿನ್ನನು
ಬೇಗನೇ ಬಾ, ಆತನ
ನಳಿದೋಳ್ಗಳು ಬಳಲದಿರಲೋ

ಪೆರಿಯಾಳ್ವಾರರು ವೆಂಕಟೇಶ್ವರನನ್ನು, ತನ್ನ ತಾಯಿಯನ್ನು ಕುಚೇಷ್ಟೆಗಳಿಂದ ಕೆಣಕಿ ಕಾಡುವ, ಅವಳು ತನ್ನ ಮುಡಿಗೆ ಮಲ್ಲಿಗೆ ದಂಡೆಯನ್ನು ಮುಡಿಸಬಂದರೆ ಅವಳಿಂದ ದೂರ ಓಡುವ, ಬಾಲಕೃಷ್ಣನನ್ನಾಗಿ ಪರಿಭಾವಿಸುತ್ತಾರೆ. ಆದರೆ, ಅವರ ಸಾಕು ಮಗಳಾದ ಅಂಡಾಳ್, ಆ ದೇವನನ್ನು ತನ್ನ ದೈವಿಕ-ಪ್ರಿಯಕರನೆಂದೇ ಭಾವಿಸಿ, ತನ್ನ ಅನೇಕ ಪ್ರೇಮ-ಭಕ್ತಿ ಗೀತೆಗಳಲ್ಲಿ, ಅವನ ಅಗಲಿಕೆಯಿಂದಾದ ವೇದನೆಯನ್ನು ತೋಡಿಕೊಂಡಿದ್ದು ಅವು ಗಾಢವಾದ ಭಾವಗಳ ಮತ್ತು ಪರಮಾನಂದದ ಅಭಿವ್ಯಕ್ತಿಯ ವಿಶಿಷ್ಟ ಗುಣವನ್ನು ಹೊಂದಿವೆ. ಯುಗ-ಯುಗಗಳಿಂದ ಮನ್ನಣೆ ಪಡೆದ ಪರಂಪರೆಗನುಗುಣವಾಗಿ, ಆಕೆ ತನ್ನ ಗೀತೆಯೊಂದರಲ್ಲಿ ಪ್ರೀತಿಯ ಪುರುಷೋತ್ತಮನಿಗೆ, ಆತನ ಮೈಬಣ್ಣವನ್ನೇ ಹೋಲುವ ನೀಲ-ಮೇಘಗಳ ಮೂಲಕ ಪ್ರೇಮಸಂದೇಶವೊಂದನ್ನು ಕಳಿಸುತ್ತಾಳೆ:

ನೀಲಿಯ ಮೇಲ್ಬಾವಣಿಯಂದದಿ,
ಮುಗಿಲನು ಮುತ್ತಿಹ
ಓ, ಮೇಘಗಳೇ:

ತಿಳಿ ನೀರಿನಿಂ ತುಂಬಿ ಹರಿವ
ಕೊಳ-ತೊರೆ-ಝರಿಗಳೇ
ವೆಂಕಟಗಿರಿಯಲಿ ನಿಂತಿಹ, ಆ

ನನ್ನ ದೊರೆಯೂ, ನಿಮ್ಮೊಂದಿಗೇ
ಬಂದಿಹನೆ?

ಕಣ್ಣೀರಿನಿಂದ ನನ್ನೆದೆಯು ನೆನೆವಂತೆ
ಮಾಡುವುದನು ಸಾಹಸವೆಂದಾತ
ಬಗೆದಿಹನೆ?

ಭಕ್ತನ ಆತ್ಮವು ವಧುವೆಂದೂ, ಭಗವಂತನೇ ವರ ಮಹಾಶಯನೆಂದೂ, ಇಬ್ಬರ ಮಿಲನವೇ ಅಧ್ಯಾತ್ಮಿಕ ಕಲ್ಯಾಣವೆಂದೂ, ಭಾವಿಸುವ ಸಖೀ ಭಾವವು ವಿವಿಧ ಧರ್ಮಗಳ ಸಾಮಾನ್ಯ ಲಕ್ಷಣವಾಗಿದೆ. ಆಳ್ವಾರರಾದರೋ ಪರಮಾತ್ಮನೊಡನೆ ತಮ್ಮ ಅನುರಾಗದ ಅನುಬಂಧವನ್ನು ತೋಡಿಕೊಳ್ಳಲು ಈ ಭಾವವನ್ನು ಹಲವು ಬಾರಿ ಬಳಸಿಕೊಂಡಿದ್ದಾರೆ. ವಿವಾಹದ ಸಂಕೇತವನ್ನು ಅದು ಸೂಚಿಸಿದರೂ, ಆ ಸಂಬಂಧವು ಕಾಮವಾಸನೆಯಿಂದ ಸಂಪೂರ್ಣ ಮುಕ್ತವಾಗಿದೆ. ಅದರಿಂದ, ಸಂಮ್ಮಿಳನದ ಆನಂದ (ಸಂಶ್ಲೇಷ) ಹಾಗೂ ವಿರಹದ ವೇದನೆ (ವಿಶ್ಲೇಷ) ಎರಡನ್ನೂ, ಒಮ್ಮೆಗೇ ಗುರುತಿಸಬಹುದಾಗಿದೆ. ಎರಡೂ ಸ್ಥಿತಿಗಳ ನಡುವಣ ಅನುಕ್ರಮವೇ, ತದೈಕ್ಯ-ಭಾವದ (ತನ್ಮಯಾನುಭಾವದ) ಪರಮಾನಂದವನ್ನು ಅನುಭವಿಸಲು ಪೂರ್ವ ನಿಬಂಧನೆಯಾಗಿರುತ್ತದೆ. 'ಸಂಮ್ಮಿಳನ'ದಲ್ಲಿ, ಆತ್ಮವು ಪರಮಾತ್ಮನಿಂದ ತಾತ್ಕಾಲಿಕವಾಗಿ ಬಂಧಿಸಲ್ಪಟ್ಟು ಮಿಲನ ಹಾಗೂ ಮೋಹಕತೆಯನ್ನು ಅನುಭವಿಸುವುದು; 'ವಿರಹ'ದಲ್ಲಿ ಅದು ನಿರಪೇಕ್ಷವಾದ ಪ್ರೇಮದ ಗಾಢ-ಭಾವದಿಂದ ಸೊರಗುವುದು. ಈ ಅನುಭವಗಳಲ್ಲಿ ಮೊದಲನೆಯದರಲ್ಲಿ, ಅನಂತತೆಯು ಕೇವಲ ಒಂದು ಕ್ಷಣವಾಗಿ ಕುಗ್ಗುವುದು; ಎರಡನೆಯದರಲ್ಲಿ, ಪ್ರತಿ ಕ್ಷಣವೂ ಅನಂತವಾಗಿ ಹಿಗ್ಗುವುದು. ಹೀಗಾಗಿ ಅನುಭಾವಿಗಳು, ವಿಶ್ಲೇಷದ ಮೇಲೆಯೇ ಒತ್ತುಕೊಡುವುದು-ವಿರಹವು ಅವರನ್ನು ಸದಾ ಪರಮಾತ್ಮನ ಸಂಸ್ಮರಣೆಯಲ್ಲಿಯೇ ತೊಡಗಿಸುತ್ತದೆಂಬುವ ಕಾರಣಕ್ಕಾಗಿ. ಆಂಡಾಳ್‌ರ ಹಲವು ಪ್ರೇಮ-ಭಕ್ತಿ ಗೀತೆಗಳಲ್ಲಿ ಈ ಲಕ್ಷಣವು ಕಾಣಿಸಿಕೊಂಡಿದೆ.

ಆದರೂ ಆಳ್ವಾರರ ಕೃತಿಗಳಲ್ಲಿನ ಪ್ರಧಾನ-ಭಾವವೆಂದರೆ, ಅದು ಎಲ್ಲ ಜೀವಿಗಳಿಗೂ ಮುಕ್ತವಾಗಿರುವ, ಸರಳ ಮಾರ್ಗವಾದ ಭಕ್ತಿ ಮತ್ತು ಸ್ವಯಂ ಶರಣಾಗತಿಯದು.

ಈ ಭಕ್ತಿ ಮತ್ತು ಪ್ರಪತ್ತಿ ಮಾರ್ಗದ ಬಗೆಗಿನ ಅಖಂಡ ವಿಶ್ವಾಸವು, ನಮ್ಮಾಳ್ವಾರ್‌ರ ಚಿರಪರಿಚಿತ ಪದ್ಯವೊಂದರಲ್ಲಿ, ವಾಕ್ಚಾತುರ್ಯಪೂರ್ಣವಾಗಿ ಪ್ರಕಟಗೊಂಡಿದೆ.

ಒಂದರೆಗಳಿಗೆಯೂ ನಿನ್ನ
ವಿರಹ ಬೇಗೆಯು ತಾಳಲಾರದ
ನಿರತ ನಿನ್ನೆದೆಯುಲೇ
ಸ್ಥಿರವಾಗಿರುವಳೋ, ಆ
ಸಿರಿದೇವಿ ಲಕುಮಿಯು
ಪದ್ಮಾಸನದಲಿ ಕುಳಿತು

ಸರಿಸಾಟಿ ಯಾರೋ
ನಿನ್ನ ಹಿರಿಮೆಗೆ,
ಓ, ದೇವ?
ಮೂರು ಲೋಕಗಳ ದೊರೆ,
ನನ್ನ ಪೊರೆವವನೇ.

ವೆಂಕಟಗಿರಿಯ ಮೇಲೆ
ಋಷಿ-ಮುನಿ-ಸಂತರು
ಅಮರ-ಸುರರೂ ಕೂಡ ನಿನ್ನ
ಇರುವನು ಕಾತುರದೆ ಕೋರುವರೋ

ಆಸರೆಯು ಬೇರಾವುದೂ
ದೊರೆಯದೆನಗೆ
ಸೇರುವೆನು ನಿನ್ನಯ ಚರಣವನೇ
ಹೊಂದುವೆನು ಆಶ್ರಯವ
ನಾನವರ ನೆರಳಿನಲೇ

ಆಳ್ವಾರರು ಹರ್ಷಾವೇಶದ ಕ್ಷಣಗಳಲ್ಲಿ ಉದ್ಗರಿಸಿದ ಹಾಗೂ ಸಮರ್ಥ ವೈಷ್ಣವ ವ್ಯಾಖ್ಯಾನಕಾರರಿಂದ ಸುದೀರ್ಘವಾಗಿ ವಿವರಿಸಲ್ಪಟ್ಟ, ಅಂತಹ ಗಂಭೀರ ಮತ್ತು ಹೃದಯಸ್ಪರ್ಶಿ ಭಾವನೆಗಳು, ಅನ್ನಮಾಚಾರ್ಯರಿಗೆ ಅವರು ದಿವ್ಯ ಪ್ರಬಂಧವನ್ನು ಅತಿ ಜಾಗರೂಕತೆಯಿಂದ ಅಭ್ಯಾಸ ಮಾಡಿದ್ದರಿಂದಲೂ, ತಮ್ಮ ಜೀವನದುದ್ದಕ್ಕೂ ನಿಕಟ ಸಂಪರ್ಕ ಹೊಂದಿದ್ದ ತಿರುಪತಿಯ ದೇವಾಲಯದಲ್ಲಿ ಪ್ರತಿದಿನವೂ ಹಾಡಲಾಗುತ್ತಿದ್ದ ಸ್ತುತಿಗಳನ್ನು ಕೇಳಿದ್ದರಿಂದಲೂ, ಚಿರಪರಿಚಿತವಾಗಿದ್ದುವು.

ವಾಸ್ತವವಾಗಿ ಅವರು ಪರಮಾತ್ಮನ ಆಸ್ಥಾನ ಕವಿಯೇ ಆಗಿದ್ದು, ತಮ್ಮ ಆರಾಧ್ಯ ದೇವನಿಗೆ ಪ್ರತಿದಿನವೂ ಒಂದು ಗೀತೆಯನ್ನು ಸಮರ್ಪಿಸುವುದು ತಮ್ಮ ಕರ್ತವ್ಯವೆಂದೂ, ಹೆಮ್ಮೆಯೆಂದೂ ನಂಬಿದ್ದರು. ಶ್ರೀ ವೆಂಕಟೇಶ್ವರನೂ ಸಹಾ, ಪ್ರತಿನಿತ್ಯದ ಗೀತೆಯ ಶ್ರವಣಕ್ಕಾಗಿ ಅದರ ಕರ್ತೃವಿನಷ್ಟೇ, ಉತ್ಸುಕತೆಯಿಂದ ಎದುರು ನೋಡುತ್ತಿದ್ದನೆಂದೂ ಹೇಳಲಾಗುತ್ತದೆ. ಬೇರಾವುದೇ ಆಸರೆಯಿಲ್ಲದ ಭಕ್ತನಾಗಿ ಕವಿಯೂ, ಅವನ ಸಂರಕ್ಷಕನಾಗಿ ಆ ದೇವನೂ ಒಬ್ಬರಿಗೊಬ್ಬರು ಎಷ್ಟರಮಟ್ಟಿಗೆ ಬೇಕಾದವರಾಗಿದ್ದರೆಂಬುದನ್ನು ಅನ್ನಮಾಚಾರ್ಯರು ಹೀಗೆ ವಿವರಿಸುತ್ತಾರೆ:

ನಾನಿರದೇ ಇದ್ದರೆ,
ಇನ್ನಾರ ಮೇಲೆ ನೀ
ಮರುಕವ ತೋರುವೆಯೋ?

ಕರುಣಾ-ಮೂರುತಿ
ನೀನೆಂಬ ಕೀರುತಿಗೆ
ಕಾರಣನೇ, ನಾನೋ

ಮೂರ್ಖರ ಮುಂದಾಳಾಗಿಯೇ ನನ್ನನು
ಕಂಡುಕೊಳ್ಳುವೆ ನೀನು,
ಗರ್ವದ ಪರ್ವತ ನಾನು
ಕೊಬ್ಬಿ ಉಬ್ಬಿದವನು
ಇಂದ್ರಿಯ ಚಾಪಲ್ಯದ
ಸಂಪನ್ನನು ನಾನು,
ನನ್ನಂತಹ ಜಂತುವ ನೀ
ತೊರೆಯುವುದಾದರೂ ಹೇಗೋ?

ವಿಷಯ-ಸುಖ ಸಾಮ್ರಾಜ್ಯದ
ನಿಜ ಅಧಿಪತಿ ನಾನು,
ಜನನ-ಪುನರ್ಜನ್ಮಗಳ
ಚಕ್ರಕೆ ಸಿಲುಕಿ,
ಕೃತ್ಯ-ಕುಕೃತ್ಯಗಳಿಗೆಲ್ಲ
ಖ್ಯಾತನಾದವ ನಾನು,
ನನ್ನ ಸರಿಸಮರನು
ಎಲ್ಲಿ ಕಾಣುವೆ ನೀನು?

ನನ್ನಂಥ ಸಲ್ಲದವನ
ನೀ ಸಲಹಿದಾಗಲ್ಲವೇ,
ನಿನ್ನ ದಯಾಶೀಲತೆಗೆ
ಮೇಲ್ಮೆಯು ಸಲ್ಲುವುದು?

ನನ್ನಿಂದಲೇ ನೀ
ಹಿರಿಮೆಯ ಹೊಂದುವೆ,
ನನ್ನಿಂದಾಗಿಯೇ,
ಗರಿಮೆಯ ಪಡೆವೆ.

ಒಬ್ಬರಿಂದಿನ್ನೊಬ್ಬರು
ಲಾಭವ ಪಡೆವವರು
ನಾವಿಬ್ಬರೇ ಕಾಣೋ,
ಓ, ವೆಂಕಟೇಶನೇ

ಸ್ನೇಹ ಭಾವವು (ಸಖ್ಯ) ಭಾಗವತ ಪುರಾಣದಲ್ಲಿ ಹೇಳಿದ ಭಕ್ತಿಯ ಒಂಬತ್ತು ಬಗೆಗಳಲ್ಲಿ ಒಂದಾಗಿದ್ದು, ಅನ್ನಮಾಚಾರ್ಯರು ಭಗವಂತನನ್ನು ಒಮ್ಮೊಮ್ಮೆ ತಮ್ಮ ಸ್ನೇಹಿತನೆಂದು ಕಾಣುವುದರಿಂದಾಗಿ, ಆತನನ್ನು ಸಲಿಗೆಯಿಂದ ಸಂಬೋಧಿಸಬಲ್ಲಂಥ ಪರಮೋನ್ನತಿಯನ್ನು ಸಾಧಿಸಿದ ಸುದೈವಿಗಳ ಸಾಲಿಗೆ ಸೇರಿದವರೆಂಬುದು, ಅವರ ಪದ್ಯಗಳಲ್ಲಿನ ಧ್ವನಿ ಮತ್ತು ಧೋರಣೆಗಳಿಂದ ಸಿದ್ಧವಾಗಿದೆ.

೨

# ಘಟನಾಪೂರ್ಣ ಜೀವನ

ಸಾಧು ಸಂತರ ಜೀವನದ ಜನಪ್ರಿಯ ಚಿತ್ರಣವು, ವಾಸ್ತವದೊಡನೆ ಕಲ್ಪನೆಯನ್ನೂ ಬಹುವಾಗಿ ಮಿಶ್ರಗೊಳಿಸಿದುದಾಗಿದ್ದು, ಸಾಮಾನ್ಯ - ಸಹಜ ಘಟನೆಗಳೂ ಸಹ ಅಲ್ಲಿ ಪವಾಡಗಳ ಛಾಯೆಯನ್ನು ತಳೆಯುವುದರಿಂದ, ಅವು ಕಾರ್ಯ-ಕಾರಣದ ಪರೀಕ್ಷೆಯಲ್ಲಿ ತಪ್ಪದೇ ಸೋಲುತ್ತವೆ. ಆದರೆ, ಸತ್ಯವು ಹೃದಯ ಮತ್ತು ಬುದ್ಧಿಗಳೆರಡರಿಂದಲೂ ಗ್ರಹಿಸಲ್ಪಡಬಲ್ಲಂತಹುದು. ಹೀಗಾಗಿ "ಹೃದಯಕ್ಕೆ ತನ್ನದೇ ಆದ ಕಾರಣಗಳಿದ್ದು, ಅವುಗಳನ್ನು ತರ್ಕವು ಅರಿಯಲಾರದು" ಎಂಬ ಅರ್ಥಪೂರ್ಣ ಹೇಳಿಕೆಯೊಂದಿದೆ. ಅಭಿಮಾನಿಗಳ ಪ್ರಶ್ನಾತೀತ ಪೂಜ್ಯತಾಭಾವವೊಂದೇ ಪ್ರಭಾ ವಲಯವನ್ನು ಸೃಷ್ಟಿಸದು, ಸಂತತನದ ಸಹಜ ಸ್ವಭಾವವೂ ಕೂಡ ಜನಪ್ರಿಯ ದಂತ ಕಥೆಗಳಿಗೆ ಎಡೆ ಮಾಡಿಕೊಡುವುದು. ಅಷ್ಟಕ್ಕೂ ಸಂತನೆಂದರೆ, ಸಾಮಾನ್ಯ ಮನುಷ್ಯನೇನಲ್ಲ; ತನ್ನ ಅನುಕಂಪದ ಕಟಾಕ್ಷದಿಂದಲೇ ವರ ಪಡೆದವರ ದುಃಖ ದುಮ್ಮಾನಗಳನ್ನು ಒಮ್ಮೆಗೇ ನಾಶ ಮಾಡಬಲ್ಲಂತಹ, ಭಗವಂತನ ಶಕ್ತಿಯಿಂದ ಆವಾಹನೆಗೊಂಡವನು. ಆತನ ಆರ್ತಮೊರೆಯೊಂದು, ಕತ್ತಲೆಯ ಸೀಮೆಯಿಂದಾಚೆಗೆ ನೆಲೆಸಿದವನಾದ ದಯಾಳು ದೇವನ ತಕ್ಷಣದ ಪ್ರತಿಕ್ರಿಯೆಯನ್ನು ಹೊರಡಿಸಬಲ್ಲುದು. ಅಪನಂಬಿಕೆಯನ್ನು ಕೆಲಮಟ್ಟಿಗಾದರೂ ಕೈಬಿಡಬೇಕಾದ ಸನ್ನಿವೇಶವಿದು.

ಆದುದರಿಂದ ಅನ್ನಮಾಚಾರ್ಯರ ಮೊಮ್ಮಗನಾದ, ಚಿನ್ನಣ್ಣನೆಂದು ಜನಪ್ರಿಯನಾದ ಚಿನ್ನತಿರುವೇಂಗಲನಾಥನು, ರಚಿಸಿರುವ ತೆಲುಗು ಭಾಷೆಯ 'ಅನ್ನಮಾಚಾರ್ಯ ಚರಿತಮು' ಹೆಸರಿನ ಕಾವ್ಯ-ಕೃತಿಯಲ್ಲಿನ ಅವರ ಜೀವನ ಚಿತ್ರಣದಲ್ಲಿ, ಹಲವಾರು ಪವಾಡ ಸದೃಶ ಘಟನೆಗಳು ಸ್ಥಾನ ಪಡೆದಿರುವುದರಲ್ಲಿ ಸೋಜಿಗವೇನಿಲ್ಲ. ಆದರೂ ಎರಡು ಕಾರಣಗಳಿಂದ, ಅದು ಇತಿಹಾಸವಾಗಿ ಬಹಳ ಬೆಲೆಯುಳ್ಳದ್ದು. ಚಿನ್ನಣ್ಣನು ತನ್ನ ತಾತನ ಜೀವನದ ಪ್ರಮುಖ ಘಟನೆಗಳ ಬಗೆಗಿನ ವಿವರಗಳನ್ನು ತನ್ನ ಕುಟುಂಬದ ಸದಸ್ಯರಿಂದಲೇ ಸಂಗ್ರಹಿಸಿದನು; ಹಾಗೂ ಆ ಸಂತನೊಡನೆ ಸಂಪರ್ಕ ಹೊಂದಿದವರು ಇನ್ನೂ ಜೀವಿಸಿದ್ದಾಗಲೇ ಈ ಕೃತಿಕಾವ್ಯವನ್ನು ರಚಿಸಿದ್ದು, ಅದು ಅವರ ಮೌನ ಸಮ್ಮತಿಯನ್ನೂ ಪಡೆಯಿತು. ಧರ್ಮನಿಷ್ಠೆಯ ತೆರೆಯ ಹಿಂದೆ, ವಾಸ್ತವ ಸಂಗತಿಗಳೂ ಕಂಡುಬಂದು ಅವುಗಳಾವುವೂ ಆತನ ಸಮಕಾಲೀನರಿಂದ

ಪ್ರಶ್ನಿಸಲ್ಪಡಲಿಲ್ಲ.

ಅನ್ನಮಾಚಾರ್ಯರು, ತಿರುಪತಿಗೆ ಸಮೀಪದ ತಾಳ್ಳಪಾಕ ಎಂಬ ಪ್ರಶಾಂತ ಗ್ರಾಮದಲ್ಲಿ, 15ನೇ ಶತಮಾನದ ಆದಿಯಲ್ಲಿ - ಬಹುಶಃ 22-05-1408ರಂದು, ನಂದವರೀಕ ಬ್ರಾಹ್ಮಣ ದಂಪತಿಗಳಿಗೆ ಜನಿಸಿದರು. ಅವರ ಪೂರ್ವಿಕರು 'ತಾಳ್ಳಪಾಕ' ಎಂಬ ಉಪನಾಮವನ್ನು, ಆ ಹಳ್ಳಿಯ ದೀರ್ಘಕಾಲೀನ ಸಂಪರ್ಕದ ಸ್ಪಷ್ಟ ಕಾರಣದಿಂದ ಪಡೆದಿದ್ದರು. ದಂತ ಕಥೆಯೊಂದು, ನವನಂದ ಸಿದ್ಧರೆಂಬ ಒಂಬತ್ತು ಮಂದಿ ಶೈವ ಯತಿಗಳ ಒಂದು ಗುಂಪು, ಈ ಗ್ರಾಮದಲ್ಲಿ ಕೀಳುಲೋಹಗಳನ್ನು ಚಿನ್ನವನ್ನಾಗಿ ಪರಿವರ್ತಿಸುವ ರಸಶಾಸ್ತ್ರದ ಪ್ರಯೋಗಗಳಲ್ಲಿ ಯಶ ಸಾಧಿಸಿದ್ದಿತೆಂದು ಹೇಳುತ್ತದೆ.

ಅನ್ನಮಾಚಾರ್ಯರ ತಂದೆ ತಾಯಿಯರಾದ ನಾರಾಯಣ ಸೂರಿ ಮತ್ತು ಲಕ್ಕಮಾಂಬಾ ಇವರು ಶಿವ ಮತ್ತು ವಿಷ್ಣು ಈರ್ವರನ್ನೂ ಸಮಾನವಾಗಿ ಆರಾಧನಾ ಭಾವದಲ್ಲಿಟ್ಟಿರುವ ಅನುಯಾಯಿಗಳ 'ಸ್ಮಾರ್ತ' ಪಂಗಡಕ್ಕೆ ಸೇರಿದವರಾಗಿದ್ದರೂ, ಅವರು ವಿಷ್ಣುವಿನ ನಿಷ್ಠ-ಭಕ್ತರಾಗಿದ್ದರೆಂದೇ ತೋರುತ್ತದೆ. ನಾರಾಯಣ ಮತ್ತು ಲಕ್ಷ್ಮೀ ಎನ್ನುವ ಅವರ ಹೆಸರುಗಳೂ ಸಹ, ಅವರ ಪೂರ್ವಿಕರೂ ಕೂಡ ವಿಷ್ಣುಭಕ್ತರಾಗಿದ್ದರೆಂಬುದನ್ನು ಸೂಚಿಸುತ್ತವೆ. ಈ ಪ್ರಾಶಸ್ತ್ಯಕ್ಕೆ ಬಹುಶಃ ಗ್ರಾಮದಲ್ಲಿ ಅಸ್ತಿತ್ವದಲ್ಲಿದ್ದ ಪುರಾತನ ದೇವಾಲಯವು ಚನ್ನಕೇಶವನೆಂದು ಸ್ಥಳೀಯವಾಗಿ ಹೆಸರಾದ ಶ್ರೀ ಕೃಷ್ಣನದಾಗಿದ್ದು, ಅದರ ನಿಕಟ ಸಂಪರ್ಕವನ್ನು ಆ ಕುಟುಂಬವು ಹಲವಾರು ತಲೆಮಾರುಗಳಿಂದ ಹೊಂದಿದ್ದುದೇ ಕಾರಣವೆನ್ನಬಹುದು.

ಗಂಡುಮಗುವೊಂದನ್ನು ಪಡೆಯಬೇಕೆಂಬ ಅಪೇಕ್ಷೆಯಿಂದ, ಈ ಸಾತ್ವಿಕ ದಂಪತಿಗಳು ವೆಂಕಟಾದ್ರಿಗಿರಿಯ ಮೇಲಿನ ಶ್ರೀ ವೆಂಕಟೇಶ್ವರನ ಸನ್ನಿಧಾನಕ್ಕೆ ಹೋದರೆಂದೂ, ಅಲ್ಲಿ ಅಸಾಧಾರಣ ಅನುಭವವೊಂದನ್ನು ಹೊಂದಿದರೆಂದೂ ಹೇಳುವರು. ಅವರಿಗೆ ದೇವಾಲಯದ ಆವರಣದೊಳಗೆ, ವಿಷ್ಣುವಿನ ಐದು ಪ್ರಮುಖ ಆಯುಧಗಳಲ್ಲಿ[11] ಒಂದಾದ 'ನಂದಕ' ಎಂಬ ಕತ್ತಿಯ ದರ್ಶನವಾಯಿತು ಹಾಗೂ ಅವರು ಕಾಲಕ್ರಮದಲ್ಲಿ ತಮ್ಮ ಪ್ರಾರ್ಥನೆಗನುಗುಣವಾಗಿ ಮಗನೊಬ್ಬನನ್ನು ಪಡೆದರು.

'ನಂದಕ' ಖಡ್ಗವು ಗೋಚರವಾದುದು ಮತ್ತು ನಂತರದಲ್ಲಿ ಅನ್ನಮಾಚಾರ್ಯರ ಜನನವಾದ ಕಥೆಯು, ತಮ್ಮ ಸಂತರೆಲ್ಲರೂ ವೈಕುಂಠದ ವಿಷ್ಣುವಿನ ದಾಸರ ಅಥವಾ ವಸ್ತುಗಳ ಅವತಾರಗಳೇ ಎಂಬ ವೈಷ್ಣವರ ಪಾರಂಪರಿಕ ನಂಬಿಕೆಗೆ ಅನುಗುಣವಾಗಿಯೇ ಇದೆ. ಪೆರಿಯಾಳ್ವಾರರು ಗರುಡನ, ಪೊಯಗೈ ಆಳ್ವಾರರು ಪಾಂಚಜನ್ಯ ಶಂಖದ ಮತ್ತು ಪೈ ಆಳ್ವಾರರು ಕೂಡಾ ನಂದಕ ಖಡ್ಗದ ಅವತಾರಗಳೆಂದೇ ಪರಿಗಣಿತರಾಗಿದ್ದಾರೆ. ಅನ್ನಮಾಚಾರ್ಯರು ಸಹಾ ತಮ್ಮ ಪೂರ್ವಿಕರಾದ ನಮ್ಮಾಳ್ವಾರರಂತೆ, ವೈಶಾಖ ಮಾಸದ ವಿಶಾಖ ನಕ್ಷತ್ರದಲ್ಲಿ ಜನಿಸಿದವರು ಹಾಗೂ ಅವರೀರ್ವರೂ ಹದಿನಾರು ವರ್ಷ ವಯಸ್ಸಿನವರಾಗಿದ್ದಾಗಲೇ, ಅದ್ಭುತಮಯವಾಗಿ ಅಧ್ಯಾತ್ಮಿಕ ಜ್ಞಾನೋದಯವನ್ನು ಹೊಂದಿದವರು.

ಹರ್ಷಿತ ದಂಪತಿಗಳು ಮಗುವಿಗೆ ಆಯ್ಕೆ ಮಾಡಿದ ಹೆಸರು 'ಅನ್ನಮಯ್ಯ' ಎಂಬುದು, ಚಿನ್ನಣ್ಣನು ಸ್ಪಷ್ಟವಾಗಿ ಹೇಳುವಂತೆ, ಅದು ವಿಷ್ಣುವಿನ ಸ್ಮರಣೆಗಾಗಿಯೇ ಇಟ್ಟ ನಾಮಾಂಕಿತ. ವಿದ್ವಾಂಸರು ಈ ಹೇಳಿಕೆಯನ್ನು, 'ಅನ್ನಂ' ಎಂದರೆ ದೇವರೆಂದು ಸೂಚಿಸುವ ವೇದದ ಶ್ಲೋಕವಾದ 'ಅನ್ನಂ ಬ್ರಹ್ಮೇತಿ ವ್ಯಜನಾತ್', ಇದರ ಉಲ್ಲೇಖದಿಂದ ವಿವರಿಸಬಯಸಿದ್ದಾರೆ. ಆದರೆ ಇನ್ನೂ ಬಹಳ ಸರಳವಾದ ವಿವರಣೆಯು, 'ಅನ್ನಂ' ಶಬ್ದವು ಪವಿತ್ರ ಸ್ತೋತ್ರವಾದ ವಿಷ್ಣು-ಸಹಸ್ರನಾಮದಲ್ಲಿನ, ವಿಷ್ಣುವಿನ ಸಾವಿರ ಹೆಸರುಗಳಲ್ಲಿ ಒಂದೆಂಬ ಸಂಗತಿಯಾಗಿ ಕಂಡುಬಂದಿದೆ. ಮಹಾಭಾರತದ ಅನುಶಾಸನ ಪರ್ವದಲ್ಲಿ ಉಕ್ತವಾಗಿರುವ ಅದನ್ನು ಪ್ರತಿದಿನವೂ ಶಾಸ್ತ್ರೀಯ ಆರಾಧನಾ ಸಮಯದಲ್ಲಿ ವಿಷ್ಣುವಿನ ಹಲವಾರು ದೇವಾಲಯಗಳಲ್ಲಿ ಪಠಣ ಮಾಡಲಾಗುವುದು. ಅಲ್ಲದೆ, ಭೌತಿಕ ಹಾಗೂ ಅಧ್ಯಾತ್ಮಿಕ ಲಾಭಗಳೆರಡನ್ನೂ ಕರುಣಿಸಬಲ್ಲ ಅಪರಿಮಿತ ಸಾಮರ್ಥ್ಯ ಹೊಂದಿದ ಶುಭಮಂತ್ರ ರಹಸ್ಯಸೂತ್ರವಿದೆಂದು, ಭಕ್ತ-ಜನರು ದೇಶದಾದ್ಯಂತ ಉತ್ಸಾಹದಿಂದ ಹಾಡುವುದಾಗಿದೆ.

ಈ ಶ್ಲೋಕದ ಮೇಲಿನ ತಮ್ಮ ಪ್ರಸಿದ್ಧ ವ್ಯಾಖ್ಯಾನದಲ್ಲಿ ಶ್ರೀ ಶಂಕರಾಚಾರ್ಯರು, 'ಭೋಕ್ತೃ' ಹಾಗೂ 'ಭುಕ್ತ' (ತಿನಿಸು ಹಾಗೂ ತಿನ್ನುವವನು) - ಈ ಅವಳಿ ಅರ್ಥದಲ್ಲಿ, "ಅನ್ನ" ಎಂಬುದು ವಿಷ್ಣುವಿನ ಹೆಸರೆಂದೇ ಹೇಳುತ್ತಾರೆ. ಏಕೆಂದರೆ ಪೂರ್ಣಬೋಧೆ ಹೊಂದಿದವರ ಪಾಲಿಗೆ ವಿಷ್ಣುವೇ 'ಜ್ಞಾನಾಹಾರ'ವೆಂದೂ, ಆದರೆ ಮಹಾ ಪ್ರಳಯ ಕಾಲದಲ್ಲಿ ಇಡೀ ವಿಶ್ವವನ್ನು ಆಹಾರವನ್ನಾಗಿ 'ಭುಜಿಸುವವನೇ' ವಿಷ್ಣುವೆಂತಲೂ ವಿವರಿಸುತ್ತಾರೆ. ಶ್ರೀ ಪರಾಶರ ಭಟ್ಟರಾದರೋ, ವಿಶಿಷ್ಟಾದ್ವೈತ ದೃಷ್ಟಿಕೋನದಿಂದ, ಇದೇ ಪದವನ್ನು ವಿಶ್ಲೇಷಿಸುತ್ತಾ ತಮ್ಮ "ಭಗವದ್-ಗುಣದರ್ಪಣ" ಎಂದು ಹೆಸರಾದ ವ್ಯಾಖ್ಯಾನದಲ್ಲಿ, ವಿಷ್ಣುವಿನ ಗುಣಧರ್ಮಗಳಲ್ಲಿ ಅಮೃತ ಸಮಾನ ಮಾಧುರ್ಯವೂ ಒಂದೆಂದೂ, ಅದನ್ನು ಸವಿದು ಆನಂದಿಸಲು ಆತನು ತನ್ನ ಭಕ್ತರಿಗೆ ಅನುಮತಿಸುವನೆಂದೂ ಎತ್ತಿ ಹೇಳುವರು. ಮಧ್ವ ಪರಂಪರೆಯ ಮೇಲೆ ಅವಲಂಬಿತವಾದ ಶ್ರೀ ಸತ್ಯಸಂಧ-ತೀರ್ಥರ ವ್ಯಾಖ್ಯಾನದಲ್ಲಿ, ಶಂಕರರ ಹಾಗೆ, ಅದೇ ಧರ್ಮಶಾಸ್ತ್ರ-ವಚನವಾದ 'ಅದ್ಯತೇ ಅತ್ತಿ'ಚ'ಕ್ಕೆ ಬೆಂಬಲವನ್ನು ವ್ಯಕ್ತಪಡಿಸಿ, ಅದು 'ಭೋಕ್ತೃ ಹಾಗೂ ಭುಕ್ತ' ಎರಡನ್ನೂ ಉದ್ದೇಶಿಸುವುದೆಂದು ವಿವರಿಸಲಾಗಿದೆ. ಹೀಗಾಗಿ, ವಿಷ್ಣುವು ಭಕ್ತರು ಮತ್ತು ಜ್ಞಾನಿಗಳೀರ್ವರಿಗೂ ಸಮಾನವಾಗಿ ಅಧ್ಯಾತ್ಮಿಕ ಆಹಾರವಾಗಿದ್ದು, ಅದರಿಂದಲೇ ಆತನನ್ನು 'ಅನ್ನ'ವೆಂದು ಸಂಬೋಧಿಸಲಾಗಿದೆ.

ಬಾಲಕ ಅನ್ನಮನು ತನ್ನ ಅಭ್ಯಾಸ ಹಾಗೂ ಗಾಯನದಲ್ಲಿ ತುಂಬಾ ಚುರುಕಾಗಿದ್ದನೆಂದು ತೋರುವುದು. ಆತನು ತನ್ನ ಎಳೆ ವಯಸ್ಸಿನಲ್ಲಿಯೇ, ಕಲಿಕೆಯಲ್ಲಿ ವಿಹಿತ ಶಾಸ್ತ್ರೀಯ ಶಿಕ್ಷಣವನ್ನು ಪಡೆದಿದ್ದನೆಂಬುದಕ್ಕೆ ಸಾಕಷ್ಟು ಆಧಾರವೊದಗುತ್ತದೆ. ಆತನು ಚನ್ನಕೇಶವನ ದೇವಾಲಯವನ್ನು ಪದೇ ಪದೇ ಸಂದರ್ಶಿಸುವ ಹಾಗೂ ದೇವರ ಸನ್ನಿಧಿಯಲ್ಲಿ ಆತನನ್ನು ಪ್ರೇಮ ಪೂರ್ಣ ಪದಗಳಿಂದ ಕರೆದು ಹಾಡುವ ಮತ್ತು ಕುಣಿಯುವ ಅಭಿಲಾಷೆ ಹೊಂದಿದ್ದನು. ಆ ವಯಸ್ಸಿಗೇ , ಅವನ ಅಪೂರ್ವ ಉದ್ಗಾರಗಳು

ಸಾಹಿತ್ಯಕ-ಪ್ರಭೆಯಿಂದ ವಿಶಿಷ್ಟವಾಗಿದ್ದು, ಅವನ ಗಾಯನವು ಅಮರ-ಸಂಗೀತ ಪ್ರತಿಭೆಯ ಲಕ್ಷಣಗಳನ್ನು ಹೊಂದಿದ್ದುವು.

ಕೇವಲ ಎಂಟು ವರ್ಷಗಳ ಬಾಲಕನಾಗಿದ್ದಾಗಲೇ, ಆತನು ಜಗತ್ತಿನ ರೀತಿ-ನೀತಿಗಳ ಕುರಿತು ಬೇಸರ ತಳೆದಿದ್ದನೆಂದು ತೋರುತ್ತದೆ. ಅತಿ ಸಂದಿಗ್ಧ ಸಂದರ್ಭವೊಂದು, ಸಾಂಸಾರಿಕ ಸಂಬಂಧಗಳ ಕುರಿತು ಅವನಲ್ಲಿ ತೀವ್ರ ಜಿಗುಪ್ಸೆಯನ್ನು ಉಂಟುಮಾಡಿತೆಂದೂ ಮತ್ತು ಅದು ಎಲ್ಲ ದುಃಖಿತ ಜೀವಿಗಳಿಗೂ ತಪ್ಪದೆ ಒದಗುವ ಗೆಳೆಯನಾದ ಕರುಣಾಳು ವಿಷ್ಣುವಿನ ಕಡೆಗೆ ಆತನು ಏಕಾಏಕಿ ಹೊರಳುವ ಹಾಗೆ ಪ್ರೇರಿಸಿತೆಂದೂ ಹೇಳಲಾಗುತ್ತದೆ.

ಬಹುಶಃ ಗಾಯನದ ಬಗೆಗಿನ ಅವನ ಗಾಢಪ್ರೇಮ ಮತ್ತು ತತ್ಫಲವಾಗಿ ಗೃಹ-ಕೃತ್ಯಗಳ ಕುರಿತಾದ ಅಲಕ್ಷ್ಯದ ಪರಿಣಾಮವಾಗಿ, ಅವನಿಗೆ ಅತ್ತಿಗೆಯಿಂದ ಪದೇಪದೇ ದೊರೆಯುತ್ತಿದ್ದ ಬೈಗಳುಗಳಿಂದಾಗಿ ಅವನು ದುರ್ವರ್ತನೆಯನ್ನು ಅನುಭವಿಸುತ್ತಿದ್ದನೆಂದು ತೋರುವುದು. ಒಂದು ಬೆಳಿಗ್ಗೆ, ಅವನಿಗೆ ತಂದೆ-ತಾಯಿ ಮತ್ತು ಅಣ್ಣ-ಅತ್ತಿಗೆಯರಿಂದ, ಮೈದಾನಕ್ಕೆ ಹೋಗಿ ದನಕ್ಕಾಗಿ ಹುಲ್ಲು ಕೊಯ್ದು ತರಬೇಕೆಂಬ ಆದೇಶ ದೊರೆಯಿತು. ಚೂಪಾದ ಕುಡಲೊಂದನ್ನು ತೆಗೆದುಕೊಂಡು ಹೋಗಿ ಹುಲ್ಲು ಕೊಯ್ಯುತ್ತಿರುವಾಗ, ಅವನು ಆಕಸ್ಮಿಕವಾಗಿ ತನ್ನ ಕಿರುಬೆರಳನ್ನೇ ಕತ್ತರಿಸಿಕೊಂಡನು. ರಕ್ತದ ಹನಿಗಳು ತನ್ನ ಬೆರಳಿನಿಂದ ತೊಟ್ಟಿಕ್ಕತೊಡಗಿದ ದೃಶ್ಯವು ಅವನಿಗೆ ರೋಷತಂದಿತು. ಈ ಅವಸ್ಥೆಗಾಗಿ ತನ್ನವರನ್ನು ದೂಷಿಸುತ್ತಾ, ಗಾಯದಿಂದುಂಟಾದ ನೋವನ್ನು ಹೇಗಾದರೂ ಅನುಭವಿಸಬಹುದಾಗಿದ್ದರೂ, ತನ್ನ ಅತ್ತಿಗೆಯ ಮೊನಚು ನಾಲಿಗೆಯನ್ನು ಸಹಿಸಿಕೊಳ್ಳುವುದಾಗದೆಂದು ತೀರ್ಮಾನಿಸಿದನು. ಆದ್ದರಿಂದ ತನ್ನ ಕುಟುಂಬದೊಂದಿಗೆ ತನ್ನ ಸಂಬಂಧವನ್ನು ಕಡಿದುಕೊಳ್ಳಲೂ ಮತ್ತು ಮನೆಯನ್ನು ತೊರೆದು ಹೊರಡಲೂ ನಿರ್ಧರಿಸಿದನು.

ಅದೇ ಸಮಯಕ್ಕೆ ಸರಿಯಾಗಿ, ಶ್ರೀ ವೆಂಕಟೇಶ್ವರನ ದೇವಾಲಯದ ದಾರಿ ಹಿಡಿದು ಹೊರಟಿದ್ದ ಸಂತೃಪ್ತ ಯಾತ್ರಿಕರ ತಂಡವೊಂದು, ಅವನ ಕಣ್ಣಿಗೆ ಬಿದ್ದಿತು. ಅದು ಅನ್ನಮಯ್ಯನ ಮುಂದಣ ಗುರಿಯನ್ನು ಗೊತ್ತುಮಾಡಿತು. ಅವರು ಹರ್ಷಾವೇಶದಿಂದ ನರ್ತಿಸುತ್ತ, ಭಕ್ತಿ-ಗೀತೆಗಳನ್ನು ವಾದ್ಯಸಮೇತ ಗುಂಪಾಗಿ ಹಾಡುತ್ತಿದ್ದರಲ್ಲದೆ, ಅವು ಹರಿ ಮತ್ತು ಗೋವಿಂದ ಎಂಬ ದೇವರನಾಮಗಳ ಉದ್ಘೋಷಣೆಯಿಂದ ಕೂಡಿದ್ದುವು. ಈ ನೋಟವು ಬಾಲಕನನ್ನು ಮರುಳುಗೊಳಿಸಲಾಗಿ, ಅವನು ಅವರ ಸಂಗದಲ್ಲಿ ತಿರುಪತಿಗೆ ಪಯಣ ಬೆಳೆಸಿದನು.

ಆ ದಿನಗಳಲ್ಲಿ, ಶ್ರೀ ವೆಂಕಟೇಶ್ವರನ ದೇವಾಲಯಕ್ಕೆ ಏಳೇ ಮೆಟ್ಟಿಲುಗಳನ್ನು ಕಾಲ್ನಡಿಗೆಯಲ್ಲಿ ಹತ್ತುವ ಮೂಲಕ ತಲುಪಬಹುದಾಗಿದ್ದು, ಒಂದು ದಿನ ಪ್ರಾತಃಕಾಲ ಯಾತ್ರಿಕರ ತಂಡವು ತಮ್ಮನ್ನು ಗುರಿಗೆ ಒಯ್ಯುವ ಆ ಮೆಟ್ಟಿಲುಗಳನ್ನು ಏರತೊಡಗಿತು. ಅನ್ನಮಯ್ಯನು ಇನ್ನೂ ಚಿಕ್ಕ ಬಾಲಕನಾಗಿದ್ದುದರಿಂದಲೂ, ಬೆಳಗಿನಿಂದ ಅನ್ನಾಹಾರ ಇಲ್ಲದುದರಿಂದಲೂ ಕೆಲಕಾಲದಲ್ಲಿಯೇ ಆಯಾಸದಿಂದ ಹಿಂದೆ ಬಿದ್ದನು. ಹಸಿವು ಮತ್ತು

ಆಯಾಸವನ್ನು ಸಹಿಸಲಾರದೆ, ಒಂದು ಸಮತಟ್ಟಾದ ಕಲ್ಲುಬಂಡೆಯ ಮೇಲೆ ಒರಗಿದನು ಹಾಗೂ ನಿದ್ರಾವಶನಾದನು. ಚಿನ್ನಣ್ಣ ಹೇಳುವಂತೆ, ನಂತರದಲ್ಲಿ ವೆಂಕಟೇಶ್ವರನ ದೈವೀ ಸಂಗಾತಿಯಾದ ಪದ್ಮಾವತಿದೇವಿಯೇ ವಾತ್ಸಲ್ಯಮಯೀ ದಾದಿಯೋರ್ವಳ ರೂಪದಲ್ಲಿ, ಬಾಲಕನಿಗೆ ಎದುರಾಗಿ ಬಂದು ಪ್ರೀತಿ-ಮಮತೆಗಳಿಂದ ಮಾತನಾಡಿಸಿದಳು.

ಅನ್ನಮಯ್ಯನಿಗೆ ತನ್ನೆರಡೂ ಕಣ್ಣುಗಳಿಗೆ ಏನೊಂದೂ ಕಾಣದಂತಾಗಿ, ಬಹು ಶೋಚನೀಯವಾಗಿ ಅತ್ತನು. ಆಗ ದೇವಿಯು ಅವನಿಗೆ, ಇಡೀ ಗಿರಿಯು ಸಾಲಿಗ್ರಾಮ ಶಿಲೆಗಳಿಂದಲೇ ಆದುದಾಗಿದ್ದರಿಂದ ಅದರ ಮೇಲೆ ಪಾದರಕ್ಷೆಗಳೊಡನೆ ಓಡಾಡುವುದು ದೈವ-ದ್ರೋಹವಾಗುವುದೆಂದು ತಿಳಿಸಿದಳು. ಆಕೆಯ ಮಾತುಗಳನ್ನು ಕೇಳಿ, ಅದರಂತೆ ಪಾದರಕ್ಷೆಗಳನ್ನು ತ್ಯಜಿಸಿದೊಡನೆಯೇ ಅವನು ತನ್ನ ದೃಷ್ಟಿಯನ್ನು ಮರಳಿ ಪಡೆದನು. ಅನುಕಂಪಮಯೀ ದೇವಿಯಾದ ಪದ್ಮಾವತಿಯು ಪರಮಾತ್ಮನಿಗೆ ಅರ್ಪಿಸಿದ ನೈವೇದ್ಯವನ್ನು ಅವನಿಗೆ ತಿನ್ನಿಸಿದ್ದಲ್ಲದೆ, ಗಿರಿಯ ಮೇಲಿನ ದೇವಾಲಯಕ್ಕೆ ದಾರಿಯನ್ನು ತೋರಿಸಿ, ನಂತರ ಮಾಯವಾದಳು.

ಈ ದೃಶ್ಯದಿಂದ ಬಾಲಕನು ಆಶ್ಚರ್ಯಚಕಿತನಾಗಿ, ಹರ್ಷಾವೇಶದಿಂದ ನೂರು ಚರಣಗಳನ್ನೊಳಗೊಂಡ 'ಶ್ರೀ ವೆಂಕಟೇಶ್ವರ ಶತಕಂ' ಗೀತೆಯನ್ನು ರಚಿಸಿದನು. ಅದು ದೇವನನ್ನು ಉದ್ದೇಶಿಸಿದ್ದಾಗಿದ್ದರೂ, ವಾಸ್ತವಿಕವಾಗಿ ದೈವೀಮಾತೆಯ ಮಹಿಮೆಯನ್ನೇ ಸಾರುತ್ತದೆ.

ಚಿನ್ನಣ್ಣನು ಸಾಕಷ್ಟು ಸವಿಸ್ತಾರವಾಗಿ ವಿವರಿಸಿರುವ ಈ ಪ್ರಸಂಗವು ಲಕ್ಷ್ಮೀದೇವಿಯು ದೀನಮಾನವ ಮತ್ತು ಸರ್ವೋತ್ತಮ ದೇವನ ನಡುವಿನ ದೈವೀ ಸಂಪರ್ಕಸೇತುವಾಗಿ ಪಾತ್ರ ನಿರ್ವಹಿಸುವಳೆಂಬ ವಿಶಿಷ್ಟಾದ್ವೈತ ಪರಿಕಲ್ಪನೆಗೆ ಅನುಗುಣವಾಗಿಯೇ ಇರುವುದಾಗಿದೆ. ಕರುಣೆಯ ಸಾಕಾರ-ರೂಪವಾದ ಆಕೆಯು ಪರಿತಾಪಪಡುವ ಜೀವಿಗಳ ಪರವಾಗಿ ಪರಮಾತ್ಮನೊಡನೆ ಮಧ್ಯಸ್ಥಿಕೆ ವಹಿಸಿ ಪ್ರತಿಪಾದಿಸುವಳು. ಯಾಮುನಾಚಾರ್ಯರು, ದೇವಿಯ ಈ ಪಾತ್ರವನ್ನು ಕುರಿತು ಮೊತ್ತಮೊದಲಿಗೆ ಪ್ರಸ್ತಾಪಿಸುತ್ತಾರೆ. ನಂತರದಲ್ಲಿ ಈ ಚಿಂತನೆಯು ಅತ್ಯಂತ ಸ್ಮರಣೀಯ ಮತ್ತು ಮನಮುಟ್ಟುವ ವಿವರಣೆಯನ್ನು ಕಾಣುವುದು, ರಾಮಾನುಜರ 'ಶರಣಾಗತಿ' ಗದ್ಯದಲ್ಲಿ. ಮುಂದೆ ರಚಿತಗೊಂಡ ಶ್ರೀವತ್ಸಾಂಕ ಮಿಶ್ರರ 'ಶ್ರೀ-ಸ್ತವ', ಪರಾಶರ ಭಟ್ಟರ 'ಶ್ರೀ ಗುಣರತ್ನ ಕೋಶ' ಮತ್ತು ವೇದಾಂತ ದೇಶಿಕರ 'ಶ್ರೀ-ಸ್ತುತಿ'ಗಳಂತಹ ಹಲವು ಸ್ತುತಿಗಳು, ಜಗತ್ತಿನ ನಿಸ್ಸಹಾಯಕ ಜೀವಿಗಳ ಬಗೆಗೆ ಆಕೆಗಿರುವ ಮಾತೃವಾತ್ಸಲ್ಯವನ್ನು ದೀರ್ಘವಾಗಿ ಪ್ರಸ್ತಾಪಿಸುತ್ತವೆ. ದೇವೀಮಾತೆಯಾದ ಶ್ರೀ ಲಕ್ಷ್ಮಿಯ ಮಧ್ಯವರ್ತಿ-ಪಾತ್ರದ ಕುರಿತ ಕಲ್ಪನೆಯಿಂದಾಗಿಯೇ, ವಿಶಿಷ್ಟಾದ್ವೈತ ಮತವು 'ಶ್ರೀ ವೈಷ್ಣವ ಮತ'ವೆಂದು ಕರೆಯಲ್ಪಟ್ಟಿತು. ಮಿಗಿಲಾಗಿ, ಆ ಮತದ ಆಧ್ಯಾತ್ಮಿಕ ಪ್ರತಿಪಾದಕರಾಗುವ ಮೂಲಕ, ಬಯಸಿದವರಿಗೆ ಭಗವಂತನ ಹಾದಿ ತೋರುವ, ಸುಚರಿತರ ಸಾಲಿನ ಮೊದಲ ಗುರುವೆಂದು ಆಕೆಯನ್ನು ಪರಿಗಣಿಸಲಾಗಿದೆ.

ಇನ್ನೂ ಲಕ್ಷಿಸಬೇಕಾದುದೆಂದರೆ, ಲಕ್ಷ್ಮಿ (ಶ್ರೀ)ಯು ಪೂರ್ತಿ ಅರಳಿದ ಕಮಲ ಪುಷ್ಪದ ಮೇಲೆ ಕುಳಿತು, ತನ್ನ ದಿವ್ಯಸಂಗಾತಿ ವಿಷ್ಣುವಿನ ವಕ್ಷದಲ್ಲಿಯೇ ವಾಸಿಸುವಳೆಂದು ಪ್ರತಿಪಾದಿಸಲಾಗಿದೆ. ಇದು ಆಕೆಯು ಆತನ ಹೃದಯದಲ್ಲಿ ಸದಾ ನೆಲಸಿರುವಳೆಂಬ ಭಾವದ ಸಾಂಕೇತಿಕ ನಿರೂಪಣೆ. ಆಕೆಯು ಅಲ್ಲಿ ನೆಲಸಿರುವುದು ಪರಮಾತ್ಮನ ಹೃದಯವನ್ನು ಮೆದುಗೊಳಿಸಿ, ಪಾಪಾತ್ಮರ ಬಗೆಗೆ ಆತನು ಉದಾರಿಯಾಗಿರುವಂತೆ ಮನವೊಲಿಸಲು. ಶ್ರೀ ವೆಂಕಟೇಶ್ವರನ ಸಂಗಾತಿ ಪದ್ಮಾವತಿಯು (ಕಮಲವನ್ನು ಕೈಲಿ ಹಿಡಿದ ವನಿತೆ) ಲಕ್ಷ್ಮಿಯ ಅವತಾರವಾಗಿದ್ದು, ದಕ್ಷಿಣ-ಭಾರತದಲ್ಲಿ ಆಕೆಯನ್ನು 'ಅಲಮೇಲು ಮಂಗೈ' (ಹೂವಿನ ಮೇಲೆ ಕುಳಿತ ಜವ್ವನೆ) ಎಂಬ ತಮಿಳು ಹೆಸರಿನಿಂದ ಪ್ರಸ್ತಾಪಿಸಲಾಗುತ್ತದೆ.

ದೇವಮಾತೆಯ ಕೈಗಳಿಂದಲೇ, ಮೈ ಮನಸ್ಸುಗಳೆರಡಕ್ಕೂ ಆಹಾರವನ್ನು ಪಡೆದ ಅನ್ನಮಯ್ಯನಿಗೆ, ಉಳಿದ ಮೆಟ್ಟಿಲುಗಳನ್ನು ಸುಲಭವಾಗಿ ಹತ್ತಲು ಸಾಧ್ಯವಾಗಿ ವೆಂಕಟಾದ್ರಿಯ ತುದಿಯನ್ನು ತಲುಪಿದನು. ಅಲ್ಲಿನ ಪ್ರಸಿದ್ಧ ದೇವಾಲಯದ ಕೊಳ, 'ಸ್ವಾಮಿ ಪುಷ್ಕರಿಣಿ'ಯಲ್ಲಿ ಮಿಂದು, ನಂತರ ಹತ್ತಿರದ ಇತರ ಪುಣ್ಯ ಸ್ಥಳಗಳನ್ನು ಸಂದರ್ಶಿಸಿದನು. ಮುಂದೆ ವೆಂಕಟೇಶ್ವರನ ದೇವಾಲಯವನ್ನು ಪ್ರವೇಶಿಸಿ, ಪವಿತ್ರ ಗರ್ಭಗುಡಿಯಲ್ಲಿನ ಪರಮಾತ್ಮನ ಮೋಹಕ ಮೂರ್ತಿಯ ದರ್ಶನ ಹೊಂದಿದನು. ತನ್ನ ಅನುಭವವನ್ನಾತನು ಪದ್ಯವೊಂದರಲ್ಲಿ ದಾಖಲಿಸಿದ್ದಾನೆ.

ನೋಡಿದೆನೋ ನಾ
ಸರ್ವೋತ್ತಮನ
ವಿಶ್ವದೊಡೆಯನ ನಾ
ಕಂಡು, ಧನ್ಯಗೊಂಡೆನೋ

ಜಾಣ ಜನರೆಲ್ಲ
ಹೊಗಳಿ ಹಾಡುವಂಥ
ಪಾತಕಹರ
ಜಲಧಾರೆಗಳ,
ಪಾಪನಾಶಿನಿ
ಪುಷ್ಕರಣಿಗಳ,
ಮತ್ತನೇಕ
ಪುಣ್ಯಧಾಮಗಳ
ನಾ ಕಂಡೆನೋ

ನಾಗರ ಹೆಡೆಗಳ
ಹೊಳೆವ ಮಣಿಗಳಿಂದ
ಕಂಗೊಳಿಪ ಮಂಟಪ,
ಹೊಂಬಣ್ಣದ ಯೋಗಪೀಠಗಳ

ನವರತ್ನ ಮಣಿಗಳಿಂದಲಿ
ಬೆಳಗುವ ಕಾಂತಿಪುಂಜವ,
ಕಂಗೆಡಿಪ ಎತ್ತರಕೆ
ಬೆಳೆದು ನಿಂತಿರುವ
ಹೊಳೆವ ಶಿಖರಗಳ,
ಭವ್ಯ ವೈಭವ ಗಿರಿಯ
ನಾ ಕಂಡೆನೋ

ಅನುಭಾವಿ ಜನಕೆ
ಅಂತರ್ ದೃಷ್ಟಿಯಲಿ
ಗೋಚರಿಪ
ಪದ್ಮಪುಷ್ಪಗಳ ಪೋಲ್ವ,
ಅನುಪಮ
ದಿವ್ಯಪಾದಗಳನು,
ಸ್ಥಿರವಾದ ಗಿರಿಯನು
ತೋರುತ ನಿಂತಿಹ
ದಿವ್ಯ ಕರಗಳನು
ನಾ ಕಂಡೆನೋ

ನೋಡಿದೆನೋ ನಾ
ವೆಂಕಟಾಚಲದೊಡೆಯನ
ಕಂಡು, ನಾ ಧನ್ಯಗೊಂಡೆನೋ

ನಂತರದಲ್ಲಿ ಅನ್ನಮಯ್ಯನು ಶ್ರೀ ವೆಂಕಟೇಶ್ವರನ ಮನೋಹರ ರೂಪವನ್ನು ಕಂಡುದರಿಂದ ಉಂಟಾದ ದಿವ್ಯಾನಂದವನ್ನು ಬಣ್ಣಿಸುವ ಬಹಳಷ್ಟು ಗೀತೆಗಳನ್ನು ಬರೆಯುವಂತಾಯಿತು. "ಚಿಂತನಾಶೀಲ ಹಿರಿಯರು ಬಿಟ್ಟು ಹೋಗಿರುವ ಸಿರಿ ಭಂಡಾರ", "ಬಾಯಾರಿದವನ ದಾಹವನ್ನು ಹಿಂಗಿಸುವ ಕರಿಮುಗಿಲು", "ಕಲ್ಪಿಸಿಕೊಂಡುದನು ಕರುಣಿಸುವ ದಿವ್ಯರತ್ನ ಚಿಂತಾಮಣಿ", "ಭವರೋಗಗಳನ್ನು ತಪ್ಪದೆ ನಿವಾರಿಸುವ ಭವ್ಯರತ್ನ" ಎಂದೆಲ್ಲಾ ಆತನು ಭಗವಂತನ ರೂಪವನ್ನು ಬಣ್ಣಿಸಿದ್ದಾನೆ. ಗಮನಾರ್ಹವಾದುದೇನೆಂದರೆ, ಈ ಪ್ರಾರಂಭಿಕ ರಚನೆಯಲ್ಲೇ ಅನ್ನಮಯ್ಯನು ಅಚಲ-ಗಿರಿಯ ಮೇಲೆ ಸ್ಥಿರವಾಗಿ ನಿಂತ ಭಗವಂತನ ಬಲಗೈಯು, ಆತನ ಪಾದಗಳತ್ತಲೇ ತೋರುವಂತಿರುವುದರ ಮಹತ್ವದತ್ತ ಸಂಪೂರ್ಣ ಅರಿವನ್ನು ಬೀರಿ ತನ್ಮೂಲಕ, ಸ್ವಯಂ ಶರಣಾಗತಿ ಸಿದ್ಧಾಂತವನ್ನು ಗಟ್ಟಿಗೊಳಿಸಿದ್ದಾನೆ.

ಅನ್ನಮಯ್ಯನು ತನ್ನ ಮೊದಲ ಭೇಟಿಯಲ್ಲಿ ಗಿರಿಯ ಮೇಲೆ ತಂಗಿದ್ದ ಸಂಗತಿಯೊಡನೆ, ಅನೇಕ ಪವಾಡಗಳು ಸೇರಿಕೊಂಡಿವೆ. ಅವನ ವಾಸ್ತವ್ಯದ ಎರಡನೇ ದಿನವು ವಿಷ್ಣುವಿನ ಆರಾಧನೆಗೆ ಪರಮ ಪ್ರಶಸ್ತವೆನ್ನಲಾದ ಏಕಾದಶಿಯಾಗಿದ್ದು, ಆತನು ಪುಷ್ಕರಣಿಯಲ್ಲಿ ಸ್ನಾನ ಮಾಡಿ ತನ್ನ ಬಟ್ಟೆಗಳು ಒಣಗುತ್ತಿರುವಂತೆಯೇ, ವೆಂಕಟೇಶ್ವರನನ್ನು ಕುರಿತು ನೂರು ಪದ್ಯಗಳ ಶತಕವೊಂದನ್ನು ರಚಿಸಿದನು.

ದೇವಾಲಯವನ್ನು ತಲುಪುತ್ತಿದ್ದ ಹಾಗೆಯೇ, ಆದರ ಬಾಗಿಲುಗಳು ಬೀಗಮುದ್ರೆಗೊಂಡುದನ್ನು ಕಂಡನು. ಆ ಕ್ಷಣವೇ, ಪದ್ಯವೊಂದನ್ನು ಆತ ಹಾಡತೊಡಗಲು, ಬಾಗಿಲುಗಳು ಚಮತ್ಕಾರಿಕವಾಗಿ ತಾವೇ ತೆರೆದುಕೊಂಡು ಆತನಿಗೆ ಆಲಯದೊಳಗೆ ದರ್ಶನವನ್ನು ದೊರಕಿಸಿಕೊಟ್ಟವು.[12] ಪದ್ಯವಾಚನವು ಮುಗಿಯುತ್ತಿದ್ದಂತೆ, ಪರಮಾತ್ಮನ ಕೊರಳನ್ನು ಅಲಂಕರಿಸಿದ್ದ ಮುತ್ತಿನ ಕಂಠಹಾರವು, ಸ್ವಾಮಿಯ ಸಂತೋಷಸೂಚಕವಾಗಿ ಜಾರಿಬಿತ್ತು. ಈ ಅದ್ಭುತ ಪ್ರಸಂಗವನ್ನು ವೀಕ್ಷಿಸುತ್ತಿದ್ದ ವೈಖಾನಸ ಪುರೋಹಿತರು ಭಯಚಕಿತರಾದುದಲ್ಲದೇ ಬಾಲಕನ ಪ್ರಚಂಡ ಭಕ್ತಿಯನ್ನು ಗುರುತಿಸಿದರು.

ಆ ನಂತರದಲ್ಲಿ ಘನ ವಿಷ್ಣುವೆಂಬ ವೈಷ್ಣವಯತಿಗಳಿಗೆ ಶ್ರೀ ವೆಂಕಟೇಶ್ವರನೇ ಕನಸಿನಲ್ಲಿ ಕಾಣಿಸಿಕೊಂಡು, ಕಪ್ಪು ಬಣ್ಣದ ಬಾಲಕ ಅನ್ನಮಯ್ಯನನ್ನು ಹುಡುಕಿ ಅವನನ್ನು ವೈಷ್ಣವಧರ್ಮಕ್ಕೆ ಸೇರಿಸಿಕೊಳ್ಳಲೂ ಮತ್ತು ಆ ಉದ್ದೇಶಕ್ಕಾಗಿ ವಿಧಿತವಾಗಿರುವ ಪಂಚಸಂಸ್ಕಾರಗಳ[13] ದೀಕ್ಷೆಯನ್ನು ನೀಡಲೂ ನಿರ್ದೇಶಿಸಿದನು. ಭಗವಂತನ ಆದೇಶವನ್ನು ತಿಳಿಸಿದಾಗ, ಅನ್ನಮಯ್ಯನು ಹರ್ಷಭರಿತನಾದನು. ಕೂಡಲೇ ವೈಷ್ಣವದೀಕ್ಷೆಯನ್ನು ಕೈಗೊಂಡು, ವಿಶಿಷ್ಟಾದ್ವೈತ ಮತವನ್ನು ಸೇರಿಕೊಂಡ ತನ್ನ ಕುಟುಂಬದ ಸದಸ್ಯರಲ್ಲಿ ಮೊದಲಿಗನಾದನು. ಅಲ್ಲದೆ, ಗೌರವಯುತವಾದ "ಆಚಾರ್ಯ" ಅಭಿದಾನವನ್ನು ಪಡೆದು, ಮುಂದೆ ಅನ್ನಮಾಚಾರ್ಯನೆಂದು ಹೆಸರಾದನು.

ಬಾಲಕ ಅನ್ನಮಯ್ಯನು ಭಕ್ತಿಗೀತೆಗಳನ್ನು ಸುಶ್ರಾವ್ಯವಾಗಿ ಹಾಡುತ್ತಾ, ಯಾತ್ರಿಕರನ್ನು ಸಂತೋಷಪಡಿಸುತ್ತಾ, ಗಿರಿಯ ಮೇಲೆ ತನ್ನ ದಿನಗಳನ್ನು ಕಳೆಯುತ್ತಿದ್ದನು. ಹಾಗೆಯೇ ವಿಶಿಷ್ಟಾದ್ವೈತವು ನಿಸ್ಸಂಶಯವಾಗಿ ಸಾರುವ,

ಬಿಸಿಲಿರಲಿ, ನೆರಳೇ ಇರಲಿ
ಬರಲಿ ಯಾವುದಾದರೂ,
ಇರುವ ಆಸರೆಯು, ನಮಗೊಂದೇ
ಗಿರಿಯ ದೊರೆಯು

- ಎಂಬ ಮೂಲ ಸಿದ್ಧಾಂತವನ್ನು ಕಲಿಯುತ್ತಿದ್ದನು. ಹೀಗಿರುವಾಗ ಅವನ ತಾಯಿಯು ಅದು ಹೇಗೋ ಅವನನ್ನು ಅಲ್ಲಿ ಪತ್ತೆ ಮಾಡಿ, ತನ್ನೊಡನೆ ಮನೆಗೆ ಮರಳುವಂತೆ ಅವನ ಮನವೊಲಿಸುವುದರಲ್ಲಿ ಯಶಸ್ವಿಯಾದಳಲ್ಲದೆ, ಮನೆಯಲ್ಲಿಯೇ ತನ್ನ ಧಾರ್ಮಿಕ ಚಟುವಟಿಕೆಗಳನ್ನು ಮುಂದುವರಿಸಲು ಅವನಿಗೆ ಪೂರ್ಣ ಸ್ವಾತಂತ್ರ್ಯವನ್ನು ಕೊಡುವುದಾಗಿ ಭರವಸೆಯನ್ನೂ ನೀಡಿದಳು.

ಮುಂದಿನ ಎಂಟು ವರ್ಷಗಳನ್ನು ಅನ್ನಮಯ್ಯನು ತೀವ್ರ ಆಧ್ಯಾತ್ಮಶೋಧನೆಯಲ್ಲಿ ಕಳೆದಿರಬೇಕೆಂದು ಸಾಮಾನ್ಯವಾಗಿ ನಂಬಲಾಗಿದೆ. ಅದಕ್ಕೆ ಆಧಾರವಾಗಿರುವ, ತಿರುಪತಿ ದೇವಾಲಯದ ಪರಿಸರದಲ್ಲಿಯೇ ಪತ್ತೆಯಾದ, ತಾಮ್ರಫಲಕದಲ್ಲಿನ ಬರಹದಂತೆ ಅವನಿಗೆ ಹದಿನಾರು ವರ್ಷವಾಗಿದ್ದಾಗ ಶ್ರೀ ವೆಂಕಟೇಶ್ವರನ ರಹಸ್ಯ-ದರ್ಶನದ

ಅನುಗ್ರಹವಾಯಿತು. ಶಾಸನವು ಮತ್ತೂ ಹೇಳುವಂತೆ, ಆ ದಿನದಿಂದ ದೈವಸ್ತುತಿಯ ಭಕ್ತಿಗೀತೆಗಳನ್ನು ರಚಿಸುವುದನ್ನು ಆತನು ಪ್ರಾರಂಭಿಸಿ, ಈ ಅಭ್ಯಾಸವನ್ನು ತನ್ನ ಜೀವಿತದ ಕೊನೆಯ ದಿನದ ತನಕ ಮುಂದುವರಿಸಿದನು.

ಚಿನ್ನಣ್ಣನು ಬರೆದ ಜೀವನ-ವೃತ್ತಾಂತದ ಪ್ರಕಾರ, ಅನ್ನಮಯ್ಯನು ತನ್ನ ಬಾಲ್ಯದಿಂದಲೇ ಹಾಡು-ಪದ್ಯಗಳನ್ನು ಸ್ವಸಿದ್ಧನಾಗಿ ರಚಿಸುತ್ತಿದ್ದನೆಂಬುದನ್ನು ಗಮನಿಸಬೇಕು. ಹೀಗಾಗಿ, ಅವನು ಹದಿನಾರು ವರ್ಷ ವಯಸ್ಸಿನವನಾಗಿದ್ದಾಗ ಪಡೆದ ದಿವ್ಯ ವೇದಾಂತಾನುಭಾವವು, ಭಗವಂತನ ಬಗೆಗಿದ್ದ ಆತನ ಪ್ರೇಮವನ್ನು ಇನ್ನೂ ತೀವ್ರಗೊಳಿಸಿ, ತನ್ನ ಉಳಿದ ಜೀವಿತದಲ್ಲಿ ಪ್ರತಿದಿನವೂ ಒಂದಾದರೂ ದೇವರಸ್ತುತಿಯನ್ನು ಧರ್ಮ ನಿಷ್ಠೆಯ ಕರ್ತವ್ಯವೆಂಬಂತೆ ರಚಿಸುವ ದೃಢ-ಸಂಕಲ್ಪವನ್ನು ಹರಕೆಯ ರೀತಿಯಲ್ಲಿ, ಕೈಗೊಳ್ಳುವಂತೆ ಪ್ರೇರಿಸಿತೆಂದೇ ಗ್ರಹಿಸಬೇಕು.

ಕೆಲಕಾಲದ ನಂತರ ಅನ್ನಮಯ್ಯನು ತನ್ನ ತಂದೆ-ತಾಯಿಯರ ದಾಕ್ಷಿಣ್ಯಕ್ಕಾಗಿ, ಅವರ ಅಪೇಕ್ಷೆಯಂತೆ ತಿರುಮಲಮ್ಮ ಮತ್ತು ಅಕ್ಕಲಮ್ಮ ಎಂಬಿಬ್ಬರು ಕನ್ಯೆಯರನ್ನು ಮದುವೆಯಾಗಿ ಸಂಸಾರಸ್ಥನಾದನು. ತಿರುಮಲಮ್ಮನು, ತಿಮ್ಮಕ್ಕ ಎಂದು ಹೆಸರಾಗಿ ಸ್ವಯಂ-ಕವಯಿತ್ರಿಯಾಗಿದ್ದು, "ಸುಭದ್ರಾ ಕಲ್ಯಾಣಮು' ಎಂಬ ಕಥನ ಕಾವ್ಯವನ್ನೂ ರಚಿಸಿ, ಅದರಿಂದ ತೆಲುಗು ಭಾಷೆಯ ಮೊದಲನೆಯ ಗಮನಾರ್ಹ ಮಹಿಳಾ ಕವಿ ಎಂಬ ಮನ್ನಣೆಯನ್ನು ಸಂಪಾದಿಸಿಕೊಂಡಳು. ಆಕೆಯ ಮಗ ನರಸಿಂಗಣ್ಣನೂ ಕೂಡಾ ಗಣನೀಯ ನೈಪುಣ್ಯದ ಕವಿಯಾಗಿದ್ದನೆಂದು ಕಂಡುಬಂದರೂ, ಅವನ ಸ್ವಂತಿಕೆಯು ಇನ್ನೂ ಕೂಡ ನಿರ್ಣಾಯಕವಾಗಿ ಸ್ಥಾಪಿತವಾಗಿಲ್ಲ. ಅಕ್ಕಲಮ್ಮನು ಪೆದ್ದ ತಿರುಮಲಾಚಾರ್ಯನಿಗೆ ಜನ್ಮ ಕೊಟ್ಟಳು. ಆತನು ತನ್ನ ಸಾತ್ವಿಕ ತಂದೆಯ ಭಕ್ತಿ-ಭಾವದ ನೈಜ ಉತ್ತರಾಧಿಕಾರಿಯಾದುದಲ್ಲದೆ, ಭಕ್ತಿ ಭಾವಾವೇಶ ಭರಿತವಾದ ಸ್ತುತಿಗಳನ್ನು ರಚಿಸುವ ಹಾಗೂ ಅವುಗಳನ್ನು ಹರ್ಷೋಲ್ಲಾಸದಿಂದ ಹಾಡುವ, ಜೋಡಿ ವರಗಳನ್ನು ಪಡೆದಿದ್ದನು. ಅವರ ಮಕ್ಕಳೂ ಸಹ ಹೆಸರಾಂತ ಕವಿಗಳಾಗಿದ್ದರು. ಹೀಗಾಗಿ, ಅನ್ನಮಾಚಾರ್ಯರು ಮತ್ತು ಅವರ ಪೀಳಿಗೆಯವರು ನೂರೈವತ್ತು ವರ್ಷಗಳಿಗೂ ಮೀರಿ, ವಿಸ್ತಾರ ವೈವಿಧ್ಯದ ವಿಷಯುಗಳ ಮೇಲಿನ ಕೃತಿಗಳಿಂದ ತೆಲುಗು ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ಇನ್ನೂ ಅತಿಶಯುವಾಗಿ, ಪೆದ್ದ ತಿರುಮಲಾಚಾರ್ಯನು ಶ್ರೀ ವೆಂಕಟೇಶ್ವರನಿಗೆ ಪ್ರತಿ ದಿನವೂ ಹೊಸತೊಂದು ಸ್ತುತಿಯನ್ನು ಸಮರ್ಪಿಸಬೇಕೆಂಬ, ತನ್ನ ತಂದೆಯ ಸಾತ್ವಿಕ-ಸಂಕಲ್ಪದ ಪದ್ಧತಿಯ ಅನುಸರಣೆಯನ್ನು ಮುಂದುವರಿಸಿಕೊಂಡುಬಂದನು.

ವಿಶಿಷ್ಟಾದ್ವೈತ ವೇದಾಂತ ಜ್ಞಾನವನ್ನು ಕರಗತಗೊಳಿಸಿಕೊಳ್ಳಬೇಕೆಂಬ ಪ್ರಬಲ ಪ್ರೇರಣೆಯು, ಅನ್ನಮಾಚಾರ್ಯರನ್ನು ತಮ್ಮ ವಿವಾಹವಾದ ಕೆಲವೇ ಸಮಯದ ಬಳಿಕ, ಆ ಕಾಲದ ಹೆಸರಾಂತ ವೈಷ್ಣವ ಆಚಾರ್ಯರಾಗಿದ್ದ ಆದಿವಾನ್ ಶಟಗೋಪ-ಯತಿಗಳ ಮಾರ್ಗದರ್ಶನವನ್ನು ಕೋರುವಂತೆ ಮಾಡಿತು. ಅವರು ಆ ಪ್ರದೇಶದ ಪ್ರಸಿದ್ಧ ಯಾತ್ರಾಸ್ಥಳವಾಗಿದ್ದ ಅಹೋಬಲದಲ್ಲಿ ಮಠವೊಂದರ ಸ್ಥಾಪಕರಾಗಿದ್ದರು. ಅನ್ನಮಾಚಾರ್ಯರು ತಮ್ಮ ಕುಟುಂಬದೊಡನೆ ಅಲ್ಲಿ ಇರುತ್ತಾ, ಮಠ ಗ್ರಂಥಗಳನ್ನು

ಅವರಲ್ಲೂ ವಿಶೇಷವಾಗಿ ಆಳ್ವಾರರ ಅನುಭಾವ ಗೀತೆಗಳ ಸಂಗ್ರಹ 'ದಿವ್ಯ ಪ್ರಬಂಧವನ್ನು' ಹಾಗೂ ಶ್ರೀ ವೈಷ್ಣವರು 'ಶರಣಾಗತಿ ಶಾಸ್ತ್ರ'ವೆಂದು ಪರಿಗಣಿಸುವ, ವಾಲ್ಮೀಕಿ-ಕೃತ ರಾಮಾಯಣವನ್ನು ಅಧ್ಯಯನ ಮಾಡುತ್ತಾ, ತನ್ನ ಗುರುವಿನೊಂದಿಗೆ ಹಲವಾರು ವರ್ಷಗಳನ್ನು ಕಳೆದರೆಂದು ತೋರುವುದು.

ಮನದಲಿ ತಾ
ಹರಿಯನು
ನೆನೆವರೆ ಸಾಕೋ
ಉಳಿದುದೆಲ್ಲವನು ತಾನೇ
ನೋಡಿಕೊಳ್ಳುವನೋ

-ಎಂಬುದಾಗಿ ಭಕ್ತನು ನಿಶ್ಚಯವಾಗಿ ಸಾರುವಂತೆ ಮುನ್ನಡೆಸುವ 'ಪ್ರಪತ್ತಿ' ತತ್ವದ ಮಹತ್ವವನ್ನು ಅವರು ಪೂರ್ಣವಾಗಿ ಗ್ರಹಿಸಿದ್ದರು.

ನಿರಾಶೆಗೆ ಎಳ್ಳಷ್ಟೂ ಎಡೆಕೊಡದ ಭಗವಂತನ ಅನಂತ ಕರುಣಾಪ್ರವಾಹದೊಂದಿಗೆ, ಭಕ್ತನ ಅತೀವ ಅಸಹಾಯಕತೆಯನ್ನು ಸೂಕ್ತವಾಗಿ ಹೋಲಿಸುವುದು ಒಂದು ವಿಶೇಷ ಸನ್ನಿವೇಶ. ಭಯ ನಿವಾರಣಾ ಭರವಸೆಯ ಭಾವವೇ, ಅನ್ನಮಾಚಾರ್ಯರ ಹಲವಾರು ಗೀತೆಗಳಲ್ಲಿ ವ್ಯಾಪಿಸಿರುವುದು, ಅರ್ಥವಾಗುವಂಥದ್ದು. ಅವುಗಳಲ್ಲಿ ಒಂದಂತೂ, ತಾನೆಷ್ಟೇ ಅನರ್ಹನಾಗಿದ್ದರೂ ಕೂಡ, ತನ್ನನ್ನು ರಕ್ಷಿಸಲು ಸದಾ ಸಿದ್ಧನಿರುವ ಪರಮಾತ್ಮನ ಕುರಿತಾದ ಗಾಢ ವಿಶ್ವಾಸವನ್ನು, ಅತಿ ಸ್ಪಷ್ಟವಾಗಿ ಪ್ರಕಟಿಸುತ್ತಿದೆ.

ದೀನ-ಹೀನ
ಜೀವನು
ನಾನು,
ಸರ್ವೋನ್ನತ
ದೇವನು
ನೀನು
ನಿರಂತರವೂ
ಮೆರೆವುದು ನಿನ್ನ
ಕೀರುತಿಯೊಂದೇ

ಅರಿಯದಾದೆ, ನಾ
ಜನನ - ಮರಣಗಳ
ಮರ್ಮವನು,
ಇಂತಿರಲು
ನಿನ್ನನಾದರೂ
ಅರಿವುದೆಂತೋ?

ನೀ ಎನ್ನ
ಜನಕನಾದ
ಕಾರಣ, ಎನಗೆ
ಕರುಣೆಯ ತೋರೋ

ಪಾಪ-ಪುಣ್ಯಗಳ
ಚಿಂತೆ ಎನಗಿಲ್ಲವೋ
ಇಂತಿರಲು ನಿನ್ನ
ಚಿಂತನೆಯು
ನನಗೆಲ್ಲೋ?
ನನ್ನ ಹೃದಯದಲೇ
ನೀನಿರುವ ಕಾರಣ
ಎನ್ನ ಪಾವನಗೊಳಿಸಿ
ಪೊರೆಯಬೇಕೋ
ನನ್ನ ಅಶೌಚ-ಸ್ಥಿತಿಯ
ನೀಚ-ಅವಸ್ಥೆಯ
ಎಚ್ಚರವು ಎನಗಿಲ್ಲ
ವಿಚಾರವಿಂತಿರಲು-ನಿನ್ನ
ಚೆಲುವಿಕೆಯ
ಚಚ್ಚರವು ನನಗೆಲ್ಲೋ?

ಏನೆಂತಾದರಿರಲಿ
ತೊರೆಯಲಾರೆಯೋ
ನೀ ಎನ್ನ,
ಅಂತೆಯೋ
ಪೊರೆಯುತಿರುವೆಯೋ
ಸತತವೂ ನನ್ನ

ಅನ್ನಮಾಚಾರ್ಯರು ವರ್ಷಾನುವರ್ಷ, ವೆಂಕಟೇಶ್ವರನಿಗೆ ಪ್ರತಿದಿನವೂ ಒಂದೊಂದು ಹೊಸ ಸ್ತುತಿಯನ್ನು ಸಮರ್ಪಿಸುವ, ತಮ್ಮ ಸಂಕಲ್ಪದ ಅನುಸರಣೆಯನ್ನು ಮುಂದುವರಿಸಿದರು. ಇತರ ದೇವ ದೇವತೆಗಳ ಆಲಯಗಳನ್ನು ಸಂದರ್ಶಿಸಿದ ಸಂದರ್ಭದಲ್ಲಿ ಸಹಾ, ವಿಶೇಷತಃ ಸಂಚಾರದ ಸಮಯದಲ್ಲಿ, ಆಯಾ ದೇವರ ಸ್ತುತಿಗಳನ್ನು ಹಾಡಿದರೂ, ತಮ್ಮ ಪರಮ-ಪ್ರಿಯ ಏಳುಮಲೆಗಳ ಪರಮಾತ್ಮನನ್ನೇ ಸಾಕ್ಷಾತ್ಕರಿಸಿಕೊಳ್ಳುತ್ತಾ, ಎಲ್ಲ ಗೀತೆಗಳನ್ನೂ ತಪ್ಪದೆ ಆತನ ನಾಮ ಸ್ಮರಣೆಯೊಂದಿಗೇ ಪರಿಸಮಾಪ್ತಿಗೊಳಿಸುತ್ತಿದ್ದರು. ಹೀಗಾಗಿ, ಶ್ರೀ ವೆಂಕಟೇಶ್ವರನ ನಾಮವು ಅವರ ಎಲ್ಲ ಪದ್ಯಗಳಲ್ಲಿಯೂ ಅಂಕಿತದಂತೆ ಕಂಡುಬರುತ್ತದೆ

ಶೃಂಗಾರ ಭಾವದ ಧಾಟಿಯಲ್ಲಿ, ಅಪ್ರತಿಮ ಕೌಶಲ್ಯದಿಂದ ಹೆಣೆದ ಅವರ ಹಲವು ಗೀತೆಗಳು, ದೈವೀ ಚೇತನದೊಡನೆ ಮಿಲನಗೊಳ್ಳಬೇಕೆಂಬ ಮಾನವನ ಆತ್ಮದ ಹಂಬಲವನ್ನು, ದೈಹಿಕ ಪ್ರೀತಿಯ ಪ್ರತಿಮೆಯ ಮೂಲಕ ಪ್ರಸ್ತುತಪಡಿಸುತ್ತವೆ. ಹಾಗೂ ಅವು, ಕೃಷ್ಣನೊಡನೆ ರಾಧೆಯ ಮತ್ತು ವ್ರಜಭೂಮಿಯ ಇತರ ಗೋಪಿಕಾ ಸ್ತ್ರೀಯರ ಪ್ರೇಮ-ಸಲ್ಲಾಪಗಳನ್ನು ಕುರಿತ ಶ್ರೇಷ್ಠ ಸಾಹಿತ್ಯಕ ವರ್ಣನೆಗಳ ಮಾದರಿಯಲ್ಲಿದ್ದು, ಬಹುಶಃ ಆ ಕಾಲಕ್ಕೇ ಸಲ್ಲುತ್ತವೆ. ಅದೇ ಸಮಯಕ್ಕೆ ಅವರು ಮಾನವ-ಜೀವಿತದ ಕ್ಷಣಿಕತೆ ಹಾಗೂ ಪಾರಮಾರ್ಥದ ಪ್ರಾಮುಖ್ಯತೆಯನ್ನು ಒತ್ತಿಹೇಳುವ ಹಲವಾರು ಗೀತೆಗಳನ್ನು ಬರೆದರು.

ಅವರ ಭಾವಗಳ ಗಾಂಭೀರ್ಯ, ಅವರ ಭಾಷೆಯ ಸೌಂದರ್ಯ, ಅವರ ಭಕ್ತಿಯ ಅತಿಶಯ, ಅವರ ಸ್ವರ ಮಾಧುರ್ಯ-ಇವೆಲ್ಲವೂ, ಜನರ ಲಕ್ಷ್ಯವನ್ನು ತ್ವರಿತವಾಗಿ ಮತ್ತು ವ್ಯಾಪಕವಾಗಿ ಆಕರ್ಷಿಸಲಾರಂಭಿಸಿದವು. ಚಿನ್ನಣ್ಣನು, ಈ ಸಂತಕವಿಯ ಜನಪ್ರಿಯತೆಯನ್ನು ಒತ್ತಿ ಹೇಳುತ್ತಾ, ಅವರೆಲ್ಲರೂ ಆತನೇನು ಮಾನವರೂಪದಲ್ಲಿ ಭೂಮಿಯ ಮೇಲೆ ಸಂಚರಿಸುವ ತುಂಬುರ-ನಾರದರೋ ಅಥವಾ ಗಂಧರ್ವನೋ? ಎಂದು ಅಚ್ಚರಿಪಡುತ್ತಿದ್ದರೆಂದು ಅಲಂಕಾರಿಕವಾಗಿ ಬಣ್ಣಿಸುತ್ತಾನೆ.

ತಾಳ್ಲಪಾಕದ ಬಳಿಯ ನಗರ, ತಂಗಟೂರಿನ ಪ್ರಧಾನನಾಗಿದ್ದ ಸಾಳುವ ನರಸಿಂಹರಾಯನಿಗೆ ಅನ್ನಮಾಚಾರ್ಯರ ಪೂಜ್ಯತೆಯ ಕುರಿತು ತಿಳಿದುಬಂದಾಗ, ಆ ಕವಿಯನ್ನು ಅತ್ಯಂತ ಗೌರವಪೂರ್ಣವಾಗಿ ಭೇಟಿ ಮಾಡಿ, ತನ್ನ ನಗರವನ್ನು ಸಂದರ್ಶಿಸಿ ಅಲ್ಲಿ ತನ್ನ ಗಣ್ಯ-ಅತಿಥಿಯಂತೆ ನೆಲೆಸಿರಬೇಕೆಂದು ವಿನಯದಿಂದ ಪ್ರಾರ್ಥಿಸಿಕೊಂಡನು. ನೈಜ-ವೈಷ್ಣವನ ಲಕ್ಷಣವೆಂದು ಪರಿಗಣಿತವಾಗಿರುವ ಈ ವಿಧೇಯ-ಗುಣದಿಂದ ಸಂತುಷ್ಟರಾದ ಅನ್ನಮಾಚಾರ್ಯರು, ಅವನ ಮನವಿಗೆ ಒಪ್ಪಿ ಅವನೊಂದಿಗೆ ಕೆಲವುಕಾಲ ಉಳಿದುಕೊಂಡರು.

ನರಸಿಂಹರಾಯನು ಬೇಗನೇ ಉನ್ನತಿ ಮತ್ತು ಪ್ರಗತಿ ಹೊಂದತೊಡಗಿ ಅತಿ ಶೀಘ್ರದಲ್ಲಿಯೇ, ವಿಜಯನಗರ ಸಾಮ್ರಾಜ್ಯದ ಪೆನುಗೊಂಡೆ ದುರ್ಗದ ದೊರೆಯಾಗಿ ಮೇಲೇರಿದನು. ಅನ್ನಮಾಚಾರ್ಯರ ಆಶೀರ್ವಾದವೇ ತನ್ನ ಏಳಿಗೆಯ ಮೂಲವೆಂದೆಣಿಸಿ, ಅವರನ್ನು ತನ್ನ ಗುರುವೆಂದೂ-ದಾತನೆಂದೂ ಗೌರವಿಸಿದನು. ಅವನ ಆಹ್ವಾನದ ಮೇರೆಗೆ, ಅನ್ನಮಾಚಾರ್ಯರು ಪೆನುಗೊಂಡೆಗೂ ಹೋಗಿ, ಅಲ್ಲಿ ಸ್ವಲ್ಪ ಸಮಯವಿದ್ದರು. ಶ್ರೀ ವೆಂಕಟೇಶ್ವರನ ಮೇಲಿನ ತನ್ನ ಕೃತಿಗಳನ್ನು ರಾಜಾಸ್ಥಾನದಲ್ಲಿ, ಅಲ್ಲಿ ನೆರೆದ ಪ್ರಜೆಗಳ ಆತ್ಮವಿಕಾಸಕ್ಕಾಗಿ, ಆಗಾಗ ಹಾಡುತ್ತಿದ್ದರು.

ಒಂದು ಸಂದರ್ಭದಲ್ಲಿ ನರಸಿಂಹರಾಯನು ದೇವರನ್ನು ಕುರಿತ ಶೃಂಗಾರ ಕಾವ್ಯವೊಂದನ್ನು ರಚಿಸುವಂತೆ, ಕವಿಯನ್ನು ಕೋರಿದನು. ಅನ್ನಮಾಚಾರ್ಯರು ಅದನ್ನು ಮನ್ನಿಸಿ ಹೊಸ ಗೀತೆಯೊಂದನ್ನು ಹಾಡಿದರು. ಅದರಲ್ಲಿ, ತನ್ನ ದೇವನೊಡನೆ ಪ್ರೇಮ-ಕ್ರೀಡೆಗಳಲ್ಲಿ ರಾತ್ರಿಯನ್ನು ಕಳೆದು, ಶಯ್ಯಾಗೃಹದಿಂದ ಹೊರಬಂದ ನಾಯಿಕೆಯನ್ನು ಅವಳ ಸಖಿಯರು ಕೆಣಕುವ ವರ್ಣನೆಯನ್ನು ಸೂಚಿಸುವ ಚಿತ್ರಣವಿದೆ:

ಅಲ್ಲಿ - ಇಲ್ಲಿ
ಕಸ್ತೂರಿಯ ಕಲೆಗಳೇಕೆ
ಹರಿಯುವ ಲಲನೆಯ
ಕೋಮಲ ಕೆಂದುಟಿಗಳ ಮೇಲೆ
ತನ್ನೊಲುಮೆಯ
ನಲ್ಲಗವಳು ಬರೆದ
ಒಲವಿನ ಓಲೆಯುದೇನೆ?

ಕೆಂಚಾದುವೇಕೆ
ಅವಳ ಚೆಲುವ
ಕಂಗಳಂಚುಗಳು
ಓ, ಗೆಳತಿಯರೆ?

ಬಾಣದಂತಹ
ವಾರೆಗಣ್ಣ ನೋಟಕೆ ಅವು
ರಕ್ತಸಿಂಚಿತವಾದುವೇನು,
ತನ್ನ ಇನಿಯನ
ದೆಸೆಯಿಂದವನು-
ಮರಳಿ ಹೊರಳಿಸಿದಾಗ?

ವನಿತೆಯುವಳ
ಕುಚಗಳೇಕೆ
ಮಿಂಚಿ ಹೊಳೆಯುತಲಿವೆ
ಕಂಚುಕದೊಳಗಿಂದ?
ರಸಿಕ ಪ್ರಿಯಕರನು
ಅವುಗಳ ಮೇಲೆ
ಕೊರೆದು ಚಿತ್ರಿಸಿದ
ಅರ್ಧ-ಚಂದ್ರಗಳಂತೆ
ಪಸರಿಸಿಕೊಂಡಿಹ
ಬೇಸಿಗೆಯ ಬೆಳದಿಂಗಳೇನವು

ಹೇಳಿ, ಗೆಳತಿಯರೆ?
ಚೆಲುವುಗೊಂಡುದಂತು
ಲಲನೆಯುವಳ
ಕಪೋಲಗಳು

ಮುತ್ತು ಮಣಿಗಳ ಸಾಲಿನಿಂದ?
ತನ್ನ ಮೋಹದ ದೇವ
ಶ್ರೀ ವೆಂಕಟೇಶ್ವರನೊಡನೆ
ಪ್ರೇಮ ಸಲ್ಲಾಪದಲಿರುವಾಗ
ಹೊರ ಹೊಮ್ಮಿದಂಥ
ಬೆವರ ಬಿಂದುಗಳೇನವು
ಹೇಳಿ, ಓ ಗೆಳತಿಯರೆ?

ಅಧರದ ಮೇಲಿನ ಗುರುತುಗಳು ಪ್ರೇಮ ಚುಂಬನವನ್ನು ಸೂಚಿಸಿದರೆ; ಕೆಂಪಾದ ಕಣ್ಣುಗಳು ನಿದ್ರಾಹೀನತೆಯನ್ನು ಸಂಕೇತಿಸಿ, ಕುಚಗಳ ಮೇಲಿನ ಉಗುರಿನ ಅರ್ಧ ಚಂದ್ರಾಕಾರದ ಗುರುತುಗಳು, ದೈಹಿಕ ಆಯಾಸದಿಂದ ಮುಖದ ಮೇಲೆ ಮೂಡಿದ ಬೆವರ ಹನಿಗಳು - ಇವೆಲ್ಲವೂ, ನಿಸ್ಸಂದೇಹವಾಗಿ, ಭಾರತೀಯ ಕಾವ್ಯದ ಪರಂಪರಾನುಗತ ಪ್ರತಿಮೆಗಳೇನೋ, ನಿಜ. ಆದರೆ ಈ ಗೀತೆಯನ್ನು ಸಾಹಿತ್ಯಕಲೆಯ ಸ್ಮರಣಾರ್ಹ ಕೃತಿಯನ್ನಾಗಿ ಮಾಡಿರುವುದು ಚಿರಪರಿಚಿತ ಚಿಹ್ನೆಗಳಿಗೆ ಉಜ್ವಲ ಉಪಮಾನಗಳನ್ನು ಒದಗಿಸಿರುವ ಕವಿಯ ಅದ್ಭುತ, ಕಲ್ಪನಾ ಸಾಮರ್ಥ್ಯ.

ಅನ್ನಮಾಚಾರ್ಯರು ಈ ಪದ್ಯವನ್ನು ರಾಜನ ಆಸ್ಥಾನದಲ್ಲಿ ವಾಚಿಸಿದಾಗ, ಅದರ ಪ್ರಜ್ವಲ ಸೊಬಗಿನಿಂದ ನರಸಿಂಹರಾಯನು ಎಷ್ಟರ ಮಟ್ಟಿಗೆ ಪ್ರಭಾವಿತನಾದನೆಂದರೆ, ಅದನ್ನು ಕವಿಯು ಮತ್ತೆ ಮತ್ತೆ ಹಾಡುವಂತೆ ಮಾಡಿದುದಲ್ಲದೆ, ನಿಜಕ್ಕೂ ಅದೊಂದು ಶುದ್ಧ ಕವಿತ್ವದ ದಿವ್ಯಮಾದರಿಯೆಂದು ಹರ್ಷೋದ್ಗಾರ ಮಾಡಿದ. ನಂತರ ಸನ್ನಿಹಿಡಿದಂಥ ಸ್ಥಿತಿಯಲ್ಲಿ, ಮರ್ಯಾದೆಯ ಎಲ್ಲೆಯನ್ನೂ ಮೀರಿ, ತನ್ನ ಮೇಲೂ ಅಂಥದೇ ಕವನವೊಂದನ್ನು ರಚಿಸಬೇಕೆಂದು ಕವಿಯನ್ನು ಅಂಗಲಾಚಿದ. ನರಸಿಂಹರಾಯನಲ್ಲಿದ್ದ ಅಗಾಧ ಕಾವ್ಯಪ್ರೇಮವೂ ಈ ತೆರನ ವಿಪರೀತ ಬಯಕೆಗೆ ಭಾಗಶಃ ಕಾರಣವಾಯಿತೇನೋ ನಿಜ, ಆದರೂ ತನ್ನ ರಚನೆಗಳೆಲ್ಲವೂ 'ವಿಷ್ಣುವಿನ ಪಾದಗಳಿಗೆ ಮಾತ್ರ ಭೂಷಣವೆನಿಸುವ ಕೃತಿಗಳೆಂದೂ, ಭಕ್ತಿಯ ಸಮರ್ಪಣೆಯೆಂದೂ' ನಂಬಿದ್ದ ಕವಿಯ ಕಲೆಯನ್ನು ತನ್ನಂತಹ ಸಣ್ಣ ರಾಜ್ಯವೊಂದರ ಕಿರಿಯರಾಜನ ವೈಭವೀಕರಣಕ್ಕೆ ಬಳಸಬೇಕೆಂದು, ಪ್ರಾರ್ಥಿಸಿಕೊಳ್ಳುವ ಮಟ್ಟಕ್ಕೆ ಹೋದುದು ಅಧಿಕಾರ ಮತ್ತು ಸಂಪತ್ತಿನ ಸಂಪಾದನೆಯು ಅವನ ವಿವೇಚನಾ ಶಕ್ತಿಯನ್ನು ಕವಿದುಕೊಂಡ ಕಾರಣದಿಂದ ಎಂಬ ಸಂಗತಿಯನ್ನೂ ಅಲ್ಲಗಳೆಯಲಾಗದು.

ಅನ್ನಮಾಚಾರ್ಯರು ನರಸಿಂಹರಾಯನ ಕೋರಿಕೆಯಿಂದ ತುಂಬಾ ಅಸಂತುಷ್ಟಗೊಂಡರಲ್ಲದೆ, ತಮ್ಮ ಕಾವ್ಯ ಮತ್ತು ಸಂಗೀತ ಪ್ರತಿಭೆಯು ಹರಿಸೇವೆಗಾಗಿ ಮಾತ್ರ ಮೀಸಲೆಂದೂ, ಅವುಗಳನ್ನು ತಾನೆಂದಿಗೂ ನರಸ್ತುತಿಗೆ ಬಳಸುವುದಿಲ್ಲವೆಂದೂ, ಸ್ಪಷ್ಟವಾಗಿ ಹೇಳಿದರು.[14] ಈ ಸಂಘರ್ಷವು ತನ್ನ ಆಸ್ಥಾನಿಕರ ಸಮ್ಮುಖದಲ್ಲಿ ನಡೆಯಿತಾದ್ದರಿಂದ, ನರಸಿಂಹರಾಯನು ತಾನು ಅವಮಾನಿತನಾದೆನೆಂದು ಭಾವಿಸಿದ ಮತ್ತು ಕೋಪವಶನಾಗಿ, ಕವಿಯನ್ನು ಸರಪಣಿಗಳಿಂದ ಕಟ್ಟಿ ಸೆರೆಮನೆಯಲ್ಲಿ ಬೀಗಮುದ್ರೆ ಮಾಡಿ ಇರಿಸಬೇಕೆಂದು ಆಜ್ಞಾಪಿಸಿದ. ಅವನ ಸೇವಕರು ಅದನ್ನು ಪರಿಪಾಲಿಸಿ,

ಸೆರೆಮನೆಯ ನಾಲ್ಕು ದಿಕ್ಕುಗಳಲ್ಲಿಯೂ ಕಾವಲು ನಿಂತರು.

ಅನ್ನಮಾಚಾರ್ಯರು ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡರು. ಅವರ ಆಲೋಚನೆಗಳು ಸ್ವಾಭಾವಿಕವಾಗಿ ಸರ್ವೋಚ್ಚ-ರಕ್ಷಕನೂ, ತನ್ನ ಹೆಸರುಗಳ ಪೈಕಿ 'ಪ್ರಣತಾರ್ತಿಹರ' (ಭಕ್ತರ ಸಂಕಟನಾಶಕ) ಎಂಬ ಸೂಕ್ತ ಹೆಸರನ್ನು ಉಳ್ಳವನೂ ಆದ ವಿಷ್ಣುವಿನ ಕಡೆಗೇ ಹೊರಳಿದುವು. ನೊಂದವರ ದುಃಖಜ್ವಾಲೆಯನ್ನು ಆರಿಸಬಲ್ಲ, ಪರಿಣಾಮಕಾರೀ ಶಕ್ತಿಯ ಹೆಸರಿನ ಬಗ್ಗೆ ತಮ್ಮ ಅಚಲ ವಿಶ್ವಾಸವನ್ನು ವ್ಯಕ್ತಪಡಿಸುವ ಆಶು ಕವಿತೆಯೊಂದನ್ನು ಅವರು ಉಚ್ಚರಿಸಿದರು.

ಹಸಿವು
ದಣಿವುಗಳ
ಕ್ಷಣಗಳಲ್ಲಿ
ಒದಗುವುದೊಂದೇ
ನೆರವು:
ಹರಿಯ ನಾಮವು
ದಾರಿ ಬೇರೆ ಇಲ್ಲವು

ಬಡತನ
ಒಬ್ಬಂಟಿತನ
ಧಾಳಿ-ಬಂಧನ
ಈ ಎಲ್ಲ
ಕಾಲದಲ್ಲಿ
ಒಂದೇ ಆಧಾರವಿಲ್ಲಿ
ಹರಿಯ ಹೆಸರಿನಲ್ಲಿ
ಯಾರೆಷ್ಟೇ ಅಲಕ್ಷಿಸಲಿ
ಬೇರೆ ದಾರಿ ಎಲ್ಲಿ?

ಆಪತ್ತು,
ಅಪವಾದ
ಅರಿಷ್ಟ-ಅಂಜಿಕೆಗಳ
ಅವಧಿಯಲ್ಲಿ
ಆಗುವಂಥ
ಒಂದೇ ಆಸರೆಯು
ಆ ಹರಿಯ ಹೆಸರು.
ಯಾರೆಷ್ಟೇ ಪರಿಶೋಧಿಸಲಿ
ಅನ್ಯ ಮಾರ್ಗವಿರದು

ಸರಪಳಿಯ ಬಂಧನ
ಮರಣ-ಶಾಸನ
ಸಾಲಿಗರಿಂದ ಸುಲಿಗೆ,
ಎಲ್ಲವರ ಬಿಡುಗಡೆಗೆ-
ಒಂದೇ, ಸಾಧನ:
ವೆಂಕಟೇಶನ ಸ್ಮರಣ.
ಯಾರೆಷ್ಟೇ ಹೋರಾಡಿದರೂ,
ಬೇರೆ ದಾರಿಯೇ ತೋರದು.

ಅವರನ್ನು ಬಂಧಿಸಿದ್ದ ಸಂಕೋಲೆಗಳು ಒಮ್ಮೆಲೇ ಕಳಚಿಬಿದ್ದವು. ಭಯಚಕಿತರಾದ ಕಾವಲು-ಭಟರು, ತಮ್ಮ ಒಡೆಯನೆಡೆಗೆ ಓಡಿ ಹೋಗಿ ಈ ಪವಾಡವನ್ನು ಅವನಿಗೆ ವರದಿ ಮಾಡಿದರು. ಆದರೂ, ಜಂಭದಿಂದ ಇನ್ನೂ ಬೀಗುತ್ತಿದ್ದ ಹಾಗೂ ತನಗಾದ ಅವಮಾನದಿಂದ ವೇದನೆಪಡುತ್ತಿದ್ದ, ನರಸಿಂಹರಾಯನು ಅವರ ಮಾತುಗಳಿಗೆ ಮನ್ನಣೆ ನೀಡಬಯಸಲಿಲ್ಲ. ಅವರ ಕಥೆಯು ಸುಳ್ಳೆಂದೂ ಹಾಗೂ ಅದನ್ನು ಹರಡಲೆಂದು ಅವರಿಗೆ ಸಾಕಷ್ಟು ಆಮಿಷವನ್ನು ಒಡ್ಡಲಾಗಿದೆಯೆಂದೂ ಆತ ಭಾವಿಸಿದ.

ಸತ್ಯ-ಸಂಗತಿಯನ್ನು ಕಂಡುಹಿಡಿಯಲು ತಾನೇ ಸೆರೆಮನೆಗೆ ನಡೆದ; ಅನ್ನಮಾಚಾರ್ಯರ ಕೈಗಳನ್ನು ಮತ್ತೆ ಸರಪಣಿಯಿಂದ ಬಿಗಿಯಲು ತನ್ನ ಭಟರಿಗೆ ಆದೇಶಿಸಿದ. ಅಲ್ಲದೆ ಅವರನ್ನು ಅಣಕಿಸುತ್ತಾ, ಹಾಡೊಂದನ್ನು ಹಾಡಿ ತನ್ನನ್ನು ಬಿಡುಗಡೆ ಮಾಡಿಕೊಳ್ಳಬೇಕೆಂದೂ, ಕೆಣಕಿದ. ಸಂತರು ಅವನ ಮೂರ್ಖತನಕ್ಕೆ ನಕ್ಕು, ಪಾಪಗಳನ್ನು ಪರಿಹರಿಸಬಲ್ಲ ಬಲವುಳ್ಳ ಹರಿನಾಮವನ್ನು ಕೊಂಡಾಡುವ ಅದೇ ಗೀತೆಯನ್ನು ಮತ್ತೊಮ್ಮೆ ಹಾಡಿದರು. ಆ ಕ್ಷಣವೇ, ಮತ್ತನಾಗಿದ್ದ ದೊರೆಯ ಎದುರಿನಲ್ಲಿಯೇ, ಸರಪಣಿಗಳು ಕಳಚಿಕೊಳ್ಳಲಾಗಿ, ಅವನು ಕವಿಯ ಹಿರಿಮೆಯನ್ನು ಮನಗಂಡು, ಅವರ ಕಾಲಿಗೆ ಬಿದ್ದು ದೈನ್ಯತೆಯಿಂದ ಕ್ಷಮೆ ಕೋರಿದನು. ಅನ್ನಮಾಚಾರ್ಯರು ಅವನನ್ನು ಕ್ಷಮಿಸಿದರೂ, ವಿಷ್ಣುಭಕ್ತರ ಭಾವನೆಗಳನ್ನು ಘಾಸಿಗೊಳಿಸಬಾರದೆಂದು ಬಲವಾಗಿ ಎಚ್ಚರಿಕೆ ನೀಡಿದರು. ಕೃತಯುಗದಲ್ಲಿ ಧ್ಯಾನದಿಂದಲೂ, ತ್ರೇತಾಯುಗದಲ್ಲಿ ತ್ಯಾಗದಿಂದಲೂ, ದ್ವಾಪರದಲ್ಲಿ ಆರಾಧನೆಯಿಂದಲೂ, ಪಡೆಯಬಹುದಾಗಿದ್ದ ದೈವಾನುಗ್ರಹವನ್ನು, ಕಲಿಯುಗದಲ್ಲಿ ಕೇವಲ ಹರಿ ಕೀರ್ತನೆಗಳನ್ನು ಹಾಡುವುದರಿಂದಲೇ ಪಡೆಯಬಹುದೆಂದೂ, ಆದ್ದರಿಂದ ಭಗವಂತನ ಮಹಿಮೆಯನ್ನು ಭಜಿಸುವವರನ್ನು ಗೌರವದಿಂದ ನೋಡಿಕೊಳ್ಳಬೇಕೆಂದೂ, ಆ ಬುದ್ಧಿಗೇಡಿ ದೊರೆಗೆ ತಿಳಿಯಹೇಳಿದರು.

ಮುಂದೆ ಅನ್ನಮಾಚಾರ್ಯರು, ಇಂತಹ ಪ್ರಾಪಂಚಿಕ ಸಂಬಂಧವನ್ನೇ ತೊರೆಯುವ ಹಾಗೂ ತಿರುಪತಿಗೆ ಹೋಗಿ ಅಲ್ಲಿ ನೆಮ್ಮದಿಯಿಂದ ಜೀವಿಸುವ, ನಿರ್ಧಾರವನ್ನು ತಳೆದರು. ನಂತರ ವಿಜಯನಗರದ ಚಕ್ರಾಧಿಪತಿಯಾದ ಸಾಳುವ ನರಸಿಂಹರಾಯರೂ ಸೇರಿದಂತೆ ಅನೇಕ ರಾಜರು-ಸಾಮ್ರಾಟರಂತಹ ಅಧಿಕಾರ ಮತ್ತು ಐಶ್ವರ್ಯಗಳ ಒಡೆಯರೊಂದಿಗೆ ಸಂಪರ್ಕವಿದ್ದರೂ ಸಹ, ಅನ್ನಮಾಚಾರ್ಯರಾಗಲೀ ಅವರ ಅನುಯಾಯಿಗಳಾಗಲೀ

ಮನುಷ್ಯ ಮಾತ್ರರ ಸನ್ಮಾನಪೂರ್ವಕವಾಗಿ ಒಂದೇ ಒಂದು ಪದ್ಯ-ಗೀತೆಯನ್ನೂ ಎಂದೂ ಬರೆಯಲಿಲ್ಲವೆಂಬುದನ್ನು ಈ ಸಂದರ್ಭದಲ್ಲಿ ಒತ್ತಿಹೇಳಬೇಕು. ಉಡುಗೊರೆ-ಸನ್ಮಾನಗಳು, ಅವರನ್ನು ಹುಡುಕಿಕೊಂಡು ಬಂದವು; ಹಾಗೂ ಅವರು ಒಳಿತು-ಕೆಡುಕು, ಹೊಗಳಿಗೆ-ತೆಗಳಿಕೆ, ಇವೆಲ್ಲವನ್ನೂ ಸಂಪೂರ್ಣ ನಿರ್ಲಿಪ್ತಭಾವದಿಂದ ಸ್ವೀಕರಿಸಿ, ಅದೃಷ್ಟದ ಅನಿವಾರ್ಯ ಚಂಚಲತೆಯ ನಡುವೆಯೂ ಶ್ರೀವೆಂಕಟೇಶ್ವರನನ್ನೇ ತಮ್ಮ ಅಮೂಲ್ಯ-ಭಂಡಾರವೆಂದು ನಂಬಿಕೊಂಡಿದ್ದರು. ವೈಷ್ಣವರ ಮಹಾಗುರುವಾದ ಯಾಮುನಾಚಾರ್ಯರ ಜೀವಮಾನದಲ್ಲಿನ ಸ್ವಾರಸ್ಯಕರ ಘಟನೆಯೊಂದು, ವಿಷ್ಣುವು 'ಅತಿಶಯವಾದ, ಅಪೂರ್ವ ಸಿರಿಕೋಶವೆಂಬ' ಚಿಂತನೆಯನ್ನೇ ಸುತ್ತುವರಿದಿದೆ. ಅನ್ನಮಾಚಾರ್ಯರು ವೈಷ್ಣವಮತದ ಸಾರವನ್ನು ಪೂರ್ಣವಾಗಿ ಹೀರಿಕೊಂಡರಲ್ಲದೆ, ವಿಷ್ಣುವೊಬ್ಬನೇ ವಿಶ್ವದ ಸರ್ವೋತ್ತಮ ದೈವವೆಂದೂ ಆದ್ದರಿಂದ ಆತನನ್ನು ಮಾತ್ರವೇ ಒಂದೇ ಮನದಿಂದ ಭಕ್ತಿಯಿಂದ ಸೇವಿಸಬೇಕೆಂಬ ತಮ್ಮ ದೃಢ-ವಿಶ್ವಾಸವನ್ನು ಪುನರುಚ್ಚರಿಸಿದರು. ಪರಮಾತ್ಮನ ಬಗೆಗಿನ ಪ್ರಧಾನ ನಿಷ್ಠೆಯನ್ನು ಅಲಕ್ಷಿಸುತ್ತಾ, ಮಾನವ ಜೀವಿಗಳನ್ನು ಸೇವಿಸುವುದರಲ್ಲಿ ಅಡಕವಾಗಿರುವ ಕೀಳ್ತನದ ನೋಟವು, ಅವರ ಗೀತೆಯೊಂದರಲ್ಲಿ ಧ್ವನಿತವಾಗಿದೆ.

ಅನ್ಯಮನುಜನ
ಸೇವೆಗೈಯುತ
ದಿನದಿನವೂ
ದೈನ್ಯ ಜೀವನ
ನಡೆಸುವುದಕೆ
ಮನುಜನಾಗಿ
ಜನಿಸಲೇತಕೆ?

ಹೊಟ್ಟೆಯನ್ನು
ಹೊರೆಯಲೆಂದು
ಮರಳಿ ಮರಳಿ
ಹೊಲಸು ತಾಣಕೆ
ಹೋಗಿ ತಾನು,
ಹೆರರ ಎದುರು
ಹೀನನಾಗಿ ಬಾಳಲೇತಕೆ?

ತುತ್ತು ತಿನಿಸಿಗಾಗಿ,
ಆಸೆಗಳ ದಾಸನಾಗಿ,
ಸಂಸಾರ ಮೋಹವೆನುವ
ಉಸುಕಿನಲ್ಲಿ ತಾನು
ಸಿಲುಕಲೇತಕೆ?

ಎಲ್ಲ ಜೀವರಲ್ಲಿ
ನಿಲ್ಲುವವನ
ಎಲ್ಲ ರೂಪಗಳ
ತಾಳುವವನ
ಕರುಣಾಳು ದೊರೆ
ವೆಂಕಟಾಚಲನ
ನೀವು ಸತತ ಸೇವಿಸಿರೋ
ದಿವ್ಯ ಸಂತಸ ಹೊಂದುವಿರೋ

ತಮ್ಮ ಪದ್ಯಗಳಲ್ಲೊಂದರಲ್ಲಿ ನಿರೂಪಿತವಾದಂತೆ, ಅನ್ನಮಾಚಾರ್ಯರು ತಮ್ಮ ಜೀವಿತದಲ್ಲೊಮ್ಮೆ ತಾವು ದಿನನಿತ್ಯವೂ ವಿಧಿಯುಕ್ತವಾಗಿ ಆರಾಧಿಸುತ್ತಿದ್ದ ಹಾಗೂ ತಾವು ಹೋದೆಡೆಗಳಿಗೆಲ್ಲ ತಮ್ಮೊಡನೆ ಒಯ್ಯುತ್ತಿದ್ದ ಸಂರಕ್ಷಕ ದೈವದ[15] ಪವಿತ್ರಮೂರ್ತಿಗಳನ್ನು ಕಳೆದುಕೊಂಡು, ಇನ್ನೊಂದು ವೇದನಾಪೂರ್ಣ ಅನುಭವವನ್ನು ಪಡೆದರು. ಎಂದು, ಎಲ್ಲಿ ಮತ್ತು ಎಂತು ಅವುಗಳು ಕಳೆದುಹೋದುವು ಹಾಗೂ ಈ ವಿಷಾದದ ಘಟನೆಯು ಯಾರಾದರೊಬ್ಬರ ಉದ್ದೇಶಪೂರ್ವಕ ದ್ವೇಷದ ಪರಿಣಾಮವೇ, ಎಂಬುವುದನ್ನು ಪದ್ಯದ ಸಾರಾಂಶದಿಂದ ನಿರ್ಧರಿಸಲಾಗದು. ಆದರೂ, ಹಿಂದೂ ಪುರಾಣದ ದೈವೀ ಹಾಗೂ ನಾಯಕ ಪಾತ್ರಗಳಾದ ಹನುಮಂತ, ಗರುಡ, ಪ್ರಹ್ಲಾದ, ಅರ್ಜುನ, ಶೇಷ ಹಾಗೂ ಕಾರ್ತವೀರ್ಯಾರ್ಜುನರಿಗೆ ಅವರು ಆರ್ತವಾಗಿ ಮೊರೆಯಿಟ್ಟು, ತಮ್ಮ ಆರಾಧ್ಯ ಮೂರ್ತಿಗಳನ್ನು ಮರಳಿ ದೊರಕಿಸಿಕೊಡಬೇಕೆಂದೂ, ನಿತ್ಯಾರಾಧನೆಯ ಸಮಯವು ಬೇಗನೇ ಸಮೀಪಿಸುತ್ತಿದೆಯೆಂದೂ, ಒಮ್ಮೆಲೇ ವೇದನೆಯಿಂದ ರೋದಿಸಿದರೆಂಬುದು ಖಂಡಿತ. ಹನುಮಂತನ ಸಹಾಯವನ್ನು ಕೋರಿದ ಕಾರಣವೆಂದರೆ: ದಂತ-ಕತೆಯೊಂದರ ಪ್ರಕಾರ, ರಾವಣನ ಬಂಧುವಾದ ಮಹಿರಾವಣನೆಂಬ ರಾಕ್ಷಸನು ರಾಮಲಕ್ಷ್ಮಣರನ್ನು ಪಾತಾಳ-ಲೋಕದಲ್ಲಿ ಬಂಧಿಗಳಾಗಿ ವಶದಲ್ಲಿರಿಸಿಕೊಂಡಿದ್ದನೆಂದೂ, ಹನುಮಂತನು ಆ ರಾಕ್ಷಸನನ್ನು ಕೊಂದು ಅವರನ್ನು ಮುಕ್ತರನ್ನಾಗಿಸಿದನೆಂಬ ಸಂಗತಿ. ಹಾಗೆಯೇ ಗರುಡನು ಲಂಕೆಯ ಯುದ್ಧದಲ್ಲಿ ಇಂದ್ರುಜಿತುವಿನ ಸರ್ಪಬಂಧನದಿಂದ ರಾಮಲಕ್ಷ್ಮಣರನ್ನು ಬಿಡಿಸಿದನು. ಪ್ರಹ್ಲಾದನು, ಪರಮಾತ್ಮನು ನರಸಿಂಹ-ರೂಪದಲ್ಲಿ ಕಂಬದ ಮೂಲಕ ದರ್ಶನ ಕೊಡುವಂತೆ ಮಾಡಿದರೆ; ಅರ್ಜುನನು ಕುರುಕ್ಷೇತ್ರ ಯುದ್ಧದ ಅವಧಿಯಲ್ಲಿ, ಭಗವಂತನ ವಿಶ್ವರೂಪದ ದರುಶನವನ್ನು ಪಡೆದವನಾದನು. ಶೇಷನಾದರೋ, ಭಗವಂತನ ಆಪ್ತ ಸೇವಕನಾದ ಕಾರಣ, ನಿರಂತರವಾಗಿ ಆತನ ಸಾಮೀಪ್ಯ ಹೊಂದಿರುವವನು. ಹಾಗೂ 'ಮಂತ್ರ ರತ್ನಾಕರ'ದ ಪ್ರಕಾರ, ಕಳುವಾದ ಅಥವಾ ಕಳೆದುಕೊಂಡ ಪದಾರ್ಥಗಳನ್ನು, ವಿಷ್ಣುಭಕ್ತನಾದ ಕಾರ್ತವೀರ್ಯಾರ್ಜುನನ ಹೆಸರನ್ನು ಸ್ಮರಿಸುವುದರಿಂದ, ಮರಳಿ ಪಡೆಯಬಹುದು.

ಪ್ರತಿಮೆಗಳು ಮರಳಿ ದೊರಕಲು ಸಾಧ್ಯವಾದ ಸಂದರ್ಭದ ಬಗೆಗೆ ಏನೂ ತಿಳಿಯದು; ಆದರೆ ಸಾಕ್ಷ್ಯಾಧಾರಗಳ ಕುರಿತು ಅನಾದರವುಳ್ಳ, ಹಾಗೂ ಕಲ್ಪನಾ ಸಾಮರ್ಥ್ಯವಿದ್ದೂ-ವಿಮರ್ಶಾಜ್ಞಾನವಿಲ್ಲದ, ಹಲವು ಉತ್ಸಾಹೀ ವಿದ್ವಾಂಸರು ಪೂರ್ಣವಾಗಿ ಹೆಣೆದ

ಕೆಲವಾರು ದಂತಕಥೆಗಳು ಪ್ರಚಾರದಲ್ಲಿವೆ. ಆದರೆ ಶ್ರೀನಿವಾಸ ರಂಗಾಪುರವೆಂಬ, ತಿರುಪತಿಯ ಸಮೀಪದ ಗ್ರಾಮವೊಂದರ ದೇವಾಲಯದಲ್ಲಿ, ಅನ್ನಮಾಚಾರ್ಯರ ಮನೆತನಕ್ಕೆ ಸೇರಿದ ಶ್ರೀ ವೆಂಕಟೇಶ್ವರ ಮತ್ತು ಆತನ ದೇವಿಯರಾದ ಶ್ರೀದೇವಿ, ಭೂದೇವಿಯರ ಪವಿತ್ರಮೂರ್ತಿಗಳನ್ನು ಇಂದಿಗೂ ಸಂರಕ್ಷಿಸಿ ಇಡಲಾಗಿದೆ.

ಮಾನವನಾದ ಮೇಲೆ ಸ್ವಲ್ಪಮಟ್ಟಿಗಾದರೂ ದೀನನಾಗಿರುವುದು ಮತ್ತು ಸಂಕಟವನ್ನು ಅನುಭವಿಸುವುದು, ಸಜ್ಜನರಿಗೂ ಹಾಗೂ ದುರ್ಜನರಿಗೂ ಸಮಾನವಾಗಿರುತ್ತದೆ. ಜಗತ್ತಿನಾದ್ಯಂತ ಸಂತರ ಜೀವನವು, ಅವರು ದಿವ್ಯದರ್ಶನದ ಆನಂದಾನುಭವವನ್ನು ಹೊಂದುವ ಮೊದಲು ವೇದನಾಪೂರ್ಣ ಅವಧಿಯನ್ನು ಸವೆಸಲೇಬೇಕಾಗುತ್ತದೆ ಎಂಬುದಕ್ಕೆ ಆಧಾರವೊದಗಿಸುತ್ತದೆ. ಆತ್ಮದ ಕಗ್ಗತ್ತಲ ರಾತ್ರಿಯು, ಅನಂತ ಆನಂದದ ಬೆಳಗಿನ ಮೊದಲಿಗೇ ಇರುತ್ತದೆ. ಸಾಂಸಾರಿಕ ಮಂದಿಯನ್ನು ವಿರಸಗೊಳಿಸಿ, ಅವರನ್ನು ನಾಸ್ತಿಕತೆ ಅಥವಾ ನಿರೀಶ್ವರವಾದದೆಡೆಗೆ ದೂಡುವ ಸಂಕಟಗಳ ಸರಮಾಲೆಯೇ, ಸದ್ಭಕ್ತಜನರನ್ನು ದೈವದ ಸಮೀಪಕ್ಕೆ ಕರೆದೊಯ್ದು ಅವರ ಧರ್ಮನಿಷ್ಠೆಯನ್ನು ಅಧಿಕಗೊಳಿಸಿ, ಅವರ ಆಧ್ಯಾತ್ಮಿಕ ವಿಕಾಸದ ಪ್ರಕ್ರಿಯೆಯನ್ನು ತೀವ್ರಗೊಳಿಸುತ್ತದೆಂಬ ವೈಪರೀತ್ಯವಿದ್ದೇ ಇದೆ. ಹಾಗೂ ಇಲ್ಲಿ ಸೇರಿಸಲೇಬೇಕಾದುದೆಂದರೆ, ಅವರೇನಾದರೂ ಅನ್ನಮಾಚಾರ್ಯರಂತಹ ವರಪ್ರಸಾದ ಪಡೆದ ಕವಿಗಳಾಗಿದ್ದಲ್ಲಿ, ಅದು ಆವರಿಸಿಕೊಂಡ ಕಗ್ಗತ್ತಲೆಯ ಮಧ್ಯೆಯೂ ದೃಢ-ವಿಶ್ವಾಸವನ್ನು ಉಪದೇಶಿಸಬಲ್ಲ ಅಮರ ಕಾವ್ಯಗಳ ರಚನೆಗೆ ಉತ್ತೇಜನ ನೀಡಿ ಸಾಹಿತ್ಯವನ್ನು ಶ್ರೀಮಂತಗೊಳಿಸುತ್ತದೆ.

ಅನ್ನಮಾಚಾರ್ಯರು ಪೆನುಗೊಂಡೆಯಿಂದ ತಿರುಪತಿಗೆ ಹೋಗಿ, ವೆಂಕಟಾದ್ರಿಗಿರಿಯ ಮೇಲೆ ಕೆಲಕಾಲ ವಾಸಿಸಿದರು. ಅಲ್ಲಿ ಅವರು 'ಶೃಂಗಾರ ಮಂಜರಿ' ಎಂಬ ಕಥನ ಕಾವ್ಯವನ್ನು ರಚಿಸಿ, ಅದರಲ್ಲಿ ಶ್ರೀ ವೆಂಕಟೇಶ್ವರನ ಜೊತೆಗೆ ಅನುರಾಗದ ಹಂಬಲವನ್ನು ಹೊತ್ತ ಕನ್ನಿಕೆಯೊಬ್ಬಳ ಬಯಕೆಯು ಸಫಲವಾದುದರ ಚಿತ್ರಣವನ್ನು ನೀಡಿದರು. ದಿನಕ್ಕೊಂದು ಹೊಸ ಗೀತೆಯನ್ನು ರಚಿಸಿ, ಭಗವಂತನಿಗೆ ಅರ್ಪಿಸುವ ಪದ್ಧತಿಯು ಅವಿರತವಾಗಿ ಮುಂದುವರಿಯಿತು. ನಂತರದಲ್ಲಿ, ಅವರು ಅಸಂಖ್ಯಾತ ಗೀತೆಗಳನ್ನು ರಚಿಸಿ ಕ್ಷೇತ್ರಕ್ಕೆ ಸಂಬಂಧಿಸಿದ ವೈಭವ ಮತ್ತು ದೃಶ್ಯಾವಳಿ, ಆಚರಣೆಗಳು ಮತ್ತು ಉತ್ಸವಗಳನ್ನೂ ಹಾಗೂ ಆ ಪವಿತ್ರಗಿರಿ ಮತ್ತು ಸನ್ನಿಧಿಯೊಳಗಿನ ಭಗವಂತನ ನೋಟದಿಂದ ತಮಗುಂಟಾದ ಸಂತೋಷ-ಸಂಭ್ರಮದ ಅನುಭವವನ್ನು ವಿಶದವಾಗಿ ನಿರೂಪಿಸಿದ್ದಾರೆ. ಕೆಲವಷ್ಟು ಪದ್ಯಗಳು ಪ್ರಾಪಂಚಿಕ ಸಂಬಂಧದ ಕ್ಷಣಿಕತೆ ಹಾಗೂ ಭಕ್ತಿ ಮತ್ತು ಸ್ವಯಂ-ಶರಣಾಗತಿಯ ಪರಮ ಪ್ರಾಮುಖ್ಯತೆಗೆ ಸಂಬಂಧಿಸಿವೆ.

ದೇವಾಲಯಕ್ಕೆ ತಾವು ನೀಡುತ್ತಿದ್ದ ಹಲವಾರು ಭೇಟಿಗಳ ಪೈಕಿ, ಒಮ್ಮೆ ಗಿರಿಯನ್ನು ಏರುತ್ತಿರುವಾಗ ಗಿರಿಯ ಶಿಖರಗಳು ಹಾಗೂ ಸರ್ಪದ ಹೆಡೆಗಳ ನಡುವಣ ಹೋಲಿಕೆಯನ್ನು ಅವರು ಗಮನಿಸಿರಬೇಕು. ವಾಸ್ತವಿಕವಾಗಿ ಕ್ಷೇತ್ರ-ಪುರಾಣದ ಚಿತ್ರಣಗಳು, ಇಡೀ ಗಿರಿಶ್ರೇಣಿಯನ್ನು ಜಗದ ಮೇಲೆ ಭಗವಂತನ ಲೀಲೆಗೆ ರಂಗವೊಂದನ್ನು ಒದಗಿಸಲಿಕ್ಕಾಗಿ ವೈಕುಂಠದಿಂದ ಭೂಮಿಗೆ ಆಗಮಿಸಿದ 'ಶೇಷ'-ನಾಗನೆಂದೇ ಪರಿಗಣಿಸಿವೆ.

ಅನ್ನಮಾಚಾರ್ಯರ ಖ್ಯಾತ ಗೀತೆಯೊಂದು ಗಿರಿಯ ಹಾಗೂ ಅಲ್ಲಿ ಸ್ಥಾಪನೆಯಾದ ದೇವಾಲಯದ ಪಾವಿತ್ರ್ಯವನ್ನು ವಿವರಿಸುತ್ತದೆ:

ನೋಡು ನೋಡು,
ಕೋಟಿ ನಾಗರ
ಹೆಡೆಗಳನು
ಕೊಡೆಯಂವದಿ
ಪಡೆದಿಹ,
ಹರಿಯ ಬಿಡಾರವನು
ನೀ ನೋಡು

ಉನ್ನತ ಗಿರಿ
ವೆಂಕಟಾದ್ರಿಯ ನೋಡು
ಬ್ರಹ್ಮಾದಿ ದೇವರಿಗೂ
ಅಪರೂಪವೀ ನೋಟವು
ಅಗಣಿತ ಯತಿಗಳು
ಅನವರತ ತಂಗಿರುವ ಬೀಡು
ಆನಂದಗಿರಿಯಿದು
ಆರಾಧಿಸು, ಅದನು ನೀ ಕಂಡು

ಅನತಿ ದೂರದಲೇ ತೋರುತಿದೆ
ಅಮರ-ಸುರರೆಲ್ಲರೂ
ಇರಲು ಬಯಸುವ ನೆಲೆಯು
ನೀ ನೋಡು, ಶೇಷಾಚಲವನು
ಅಸಂಖ್ಯ ಬ್ರಹ್ಮರು
ಬಂದು ನೆಲಸಿರುವ
ಅನಂತ-ಅಮೂಲ್ಯ ಸಿರಿಯ
ಬಂಗಾರದಂತೆ ಬೆಳಗುವ
ಶೃಂಗಗಳ ಉತ್ತುಂಗ ಗಿರಿಯು

ನೀ ನೋಡು ವೆಂಕಟಾಚಲವ
ಸ್ವರ್ಗ ಸುಖದ ಪೀಠವ,
ವೆಂಕಟೇಶನ ಹಿರಿಮೆಯ ಮೂಲವ
ಸಿರಿಯು ಮೇರೆ ಮೀರಿ ಹರಿವ
ಸತ್ಯನಿಧಿಯ ಕುಟೀರವ
ಪವಿತ್ರತಮ-ಪರಮ ಪಾವನವಾ

ವಿಶಿಷ್ಟಾದ್ವೈತದ - ಮತ ಪ್ರವರ್ತಕರು ಹೇಳುವಂತೆ, ಶ್ರೀ ಕೃಷ್ಣನು ಅರ್ಜುನನಿಗೆ-ಪುನರ್ಜನ್ಮ ಚಕ್ರದಿಂದ ಬಿಡುಗಡೆ ಹೊಂದಲು ಮಾನವರಿಗಿರುವ ವಿವಿಧ ಮಾರ್ಗಗಳನ್ನು ಭಗವದ್ಗೀತೆಯಲ್ಲಿ ವಿವರಿಸಿದ ನಂತರ, ಅಂತಿಮವಾಗಿ ಅತ್ಯಂತ ಸುಲಭವಾದ ಹಾದಿಯೊಂದನ್ನು ಬೋಧಿಸುತ್ತಾನೆ: "ನನ್ನಲ್ಲಿ ಮಾತ್ರ ಆಶ್ರಯವನ್ನು ಅರಸು; ದುಃಖ ಪಡಬೇಡ, ನಾನು ನಿನ್ನನ್ನು ಎಲ್ಲ ಪಾಪಗಳಿಂದ ಮುಕ್ತ ಮಾಡುವೆ" ಎಂದು ಹೇಳುವ ಮೂಲಕ. ಭಗವಂತನ ಚರಣಗಳು ಭಕ್ತರಿಗೆ ಏಕ-ಮಾತ್ರ ಆಸರೆಯಾಗಿರುವುದರಿಂದಲೇ, ಅವರಿಂದ ವಿಶೇಷವಾಗಿ ಆರಾಧಿಸಲಾಗುವ ಆಪ್ತ-ವಸ್ತುವೆಂದು ಸಂಗ್ರಹಿಸಲ್ಪಟ್ಟಿವೆ; ಮತ್ತು ಅನ್ನಮಾಚಾರ್ಯರು ಅವುಗಳನ್ನು ಕೊಂಡಾಡಲು ಅನೇಕ ಗೀತೆಗಳನ್ನು ರಚಿಸಿದರು. ತಮ್ಮ ಪ್ರಸಿದ್ಧ ಗೀತೆಯೊಂದರಲ್ಲಿ, ಅವರು ಭಕ್ತಿ-ಆವೇಶದಿಂದ ಭಗವಂತನ ವಿವಿಧ ಅವತಾರಗಳ ಅವಧಿಯಲ್ಲಿ ಆತನ ಪಾದಗಳಿಗೆ ಸಂಬಂಧಿಸಿದ ಹಲವು ಸಂದರ್ಭಗಳನ್ನು ಸ್ಮರಿಸಿಕೊಳ್ಳುತ್ತಾರೆ.

ಇದೇ ಪಾದವನು
ಬ್ರಹ್ಮ ತಾನು ತೊಳೆದನೋ
ಇದೇ ಪಾದವು ತಾನು
ಬ್ರಹ್ಮ ತೇಜವನು ಉಳಿಸಿತೋ

ಇದೇ ಪಾದವು
ಭುವಿಯನಳೆಯಲೆದ್ದಿತೋ
ಬಲಿಯ ತಲೆಯ ಮೆಟ್ಟಿತೋ
ಬಲನ ವೈರಿಯ ಸಲಹಲೆಂದು
ತಾರೆ ಭರಿತ ಮುಗಿಲನೊದ್ದಿತೋ

ಪಾದವಿದುವೇ,
ಮಾನಿನಿಯೋರ್ವಳ
ಪಾಪವನ್ನು ಕಳೆದುದೋ
ಸರ್ಪಶಿರವನು ತುಳಿದುದೋ

ಸಿರಿದೇವಿಯು ತಾ ಪ್ರೀತಿಯಿಂದ
ಒತ್ತುತ್ತಿರುವ ಚರಣವಿದೋ
ತುರುಗವನೇರುವ
ದೇವ ಪಾದವಿದೋ

ಪ್ರಮುಖ ಭಕುತರಿಗೆ
ಅಪಾರ ವರವೀವ ಪಾದವಿದು
ಪರಮಾನಂದದ ತವರು
ಪಾವನಕರವಾದ ಪಾದವು

'ವೆಂಕಟಗಿರಿಯು
ಅನವರತ ಇರುವುದೆಂದು'
ಸಾರುತಿರುವ ಚರಣವು

ವಾಮನನಾಗಿ ಆತನು ಭೂಮ್ಯಾಕಾಶಗಳನ್ನು ಅಳೆದ; ಅಸುರರ ಅರಸು, ಬಲಿಯನ್ನು ತುಳಿದ; ಬಲನ ವೈರಿಯಾದ ಇಂದ್ರನಿಗೆ ಸ್ವರ್ಗವನ್ನು ಮರಳಿಸಿಕೊಟ್ಟ. ರಾಮನಾಗಿ ತನ್ನ ಪಾದ-ಸ್ಪರ್ಶ ಮಾತ್ರದಿಂದಲೇ, ಅಹಲ್ಯೆಯನ್ನು ಪಾಪ ದೋಷದಿಂದ ಮುಕ್ತಗೊಳಿಸಿದ; ಕೃಷ್ಣನಾಗಿ ಕಾಳೀಯ-ಸರ್ಪದ ಹೆಡೆಯ ಮೇಲೆ ನಾಟ್ಯವಾಡಿದ; ಕಲ್ಕಿಯಾಗಿ ಅವನು ಪಾಪಮೂಲವನ್ನೇ ನಾಶಗೊಳಿಸಲು, ಕುದುರೆಯನೇರಿ ಸಂಹರಿಸುವ.

ಅನ್ನಮಾಚಾರ್ಯರು ತಮ್ಮ ಜೀವಿತದ ಕೊನೆಯ ವರ್ಷಗಳ ಬಹುಪಾಲು ಕಾಲವನ್ನು ತಾಳ್ಳಪಾಕ ಮತ್ತು ತಿರುಪತಿಗಳ ಮಧ್ಯೆ ಸರತಿಯಂತೆ ಸಂಚರಿಸುತ್ತಾ ಹಾಗೂ ಶ್ರೀ ವೆಂಕಟೇಶ್ವರನ ವಾರ್ಷಿಕ ಬ್ರಹ್ಮೋತ್ಸವ ಸಮಾರಂಭದಲ್ಲಿ ತಪ್ಪದೆ ಭಾಗವಹಿಸುತ್ತಾ, ನೆಮ್ಮದಿಯಿಂದ ಕಳೆದರೆಂದು ತೋರುವುದು. ಸಾಕಷ್ಟು ಭೂಮಿಯನ್ನೂ ಅಲ್ಲದೆ ಅನೇಕ ಉಡುಗೊರೆಗಳನ್ನು ತಮ್ಮ ಅಭಿಮಾನಿಗಳಿಂದ, ತಾವು ಕೇಳದೆಯೇ-ಕೊಡುಗೆಯಾಗಿ ಪಡೆದು, ಆ ಮೂಲಗಳಿಂದ ಬಂದ ಆದಾಯವನ್ನು ಅನ್ನದಾನ ಹಾಗೂ ವಿವಿಧ ನವ, ನವ ಉತ್ಸವಾದಿಗಳನ್ನು ನಡೆಸುವ ಮೂಲಕ, ಭಗವಂತನ ಸೇವೆಗಾಗಿಯೇ ಧಾರಾಳವಾಗಿ ವಿನಿಯೋಗಿಸಿದರು.

ಅವರ ಮೊಮ್ಮಕ್ಕಳಲ್ಲಿ ಒಬ್ಬರಾದ ರೇವಣೂರಿ ವೆಂಕಟಾಚಾರ್ಯರ ಎರಡು ಕಾವ್ಯ-ಕೃತಿಗಳಾದ 'ಶ್ರೀಪಾದ ರೇಣು ಮಹಾತ್ಮ್ಯಂ' ಹಾಗೂ 'ಶಕುಂತಲಾ ಪರಿಣಯಂ'ಗಳಲ್ಲಿನ ನಿರ್ದಿಷ್ಟ ಉಲ್ಲೇಖಗಳಿಂದ ಅನ್ನಮಾಚಾರ್ಯರು, ಶ್ರೀ ವೆಂಕಟೇಶ್ವರನೊಂದಿಗೆ ದೇವಿ ಅಲಮೇಲು ಮಂಗೈ ಕಲ್ಯಾಣೋತ್ಸವವನ್ನು, ತಾವು ವಧುವಿನ ತಂದೆಯ ಪಾತ್ರ-ವಹಿಸಿ, ನೆರವೇರಿಸಿದರೆಂದು ಗೊತ್ತಾಗುತ್ತದೆ. ಇದಕ್ಕೆ ಪೂರ್ವದಲ್ಲಿ, ಪೆರಿಯಾಳ್ವಾರರು ತಮ್ಮ ಸಾಕು-ಮಗಳಾದ ಆಂಡಾಳಳ ಲಗ್ನವನ್ನು ಶ್ರೀ ರಂಗನಾಥನೊಡನೆ ನೆರವೇರಿಸಿದ್ದಕ್ಕಾಗಿ, ಶ್ರೀ ವೈಷ್ಣವರಿಂದ 'ಭಗವಂತನ ಮಾವ'ನೆಂದು ಗೌರವಯುತವಾಗಿ ಕರೆಯಲ್ಪಟ್ಟಿದ್ದರು. ಅನ್ನಮಾಚಾರ್ಯರೂ ಸಹ, ಶ್ರೀ ವೆಂಕಟೇಶ್ವರನ ಸಂಬಂಧವಾಗಿ, ತಮ್ಮ ಸಮಕಾಲೀನರಲ್ಲಿ ಅದೇ ತೆರನ ಗೌರವವನ್ನು ಸಂಪಾದಿಸಿದ್ದರು.

ಭಗವಂತನಿಗೆ, ತಮ್ಮ ಕೊನೆಯರಿಯದ ಭಕ್ತಿ ಹಾಗೂ ದೀಕ್ಷಾ-ಬದ್ಧ ಕೈಂಕರ್ಯದ ಫಲವಾಗಿ, ಅವರು ಹಲವು ಪವಾಡ-ಸದೃಶ ಶಕ್ತಿಯನ್ನು ಸಂಪಾದಿಸಿದರು. ಅವರು ಸಂಕಲ್ಪಿಸಿದ್ದು ಈಡೇರುತ್ತಿತ್ತು ಹಾಗೂ ಅವರು ಅನುಗ್ರಹಪೂರ್ವಕವಾಗಿ ಇಲ್ಲವೇ ಆಗ್ರಹಪೂರ್ವಕವಾಗಿ ನುಡಿದುದು ನಡೆಯುತ್ತಿತ್ತು. ಪೆದ್ದತಿರುಮಲಾಚಾರ್ಯ ಹಾಗೂ ಚಿನ್ನಣ್ಣ ಇಬ್ಬರೂ, ತಮ್ಮ ಬರಹಗಳಲ್ಲಿ ಗೋಡಂಬಿಯ ಗಿಡವೊಂದರ ಕಥೆಯ ಬಗೆಗೆ ಉಲ್ಲೇಖಿಸುತ್ತಾರೆ. ಒಮ್ಮೆ ಅನ್ನಮಾಚಾರ್ಯರು, ಗೋಡಂಬಿ ಗಿಡವೊಂದರಿಂದ ಹಲವು ಹೊಳೆವ ಕೆಂಪು ಹಣ್ಣುಗಳನ್ನು ಬಿಡಿಸಿ, ಶ್ರೀ ವೆಂಕಟೇಶ್ವರನಿಗೆ ತಮ್ಮ ಪೂಜೆಯ ವೇಳೆಯಲ್ಲಿ

ಅರ್ಪಿಸಿದರು. ಆದರೆ, ನಂತರ ಅವುಗಳಲ್ಲಿ ಒಂದರ ರುಚಿ ನೋಡಿ ಅದು ಹುಳಿಯಾಗಿದ್ದುದರಿಂದ ತಮ್ಮ ಕೃತ್ಯದ ಬಗ್ಗೆ ತೀವ್ರವಾಗಿ ವಿಷಾದಿಸಿದರು. ಆಗ ಇನ್ನು ಮುಂದೆ, ಆ ಮರವು ಕೇವಲ ಸಿಹಿಯಾದ ಹಣ್ಣುಗಳನ್ನೇ ನೀಡಬೇಕೆಂದು ಅಪೇಕ್ಷಿಸಿದರು, ಮತ್ತು ಅವರ ಕೋರಿಕೆಯು ಒಮ್ಮೆಲೇ ಈಡೇರಿತು. ಇನ್ನೊಮ್ಮೆ, ತನ್ನ ಮದುವೆಗಾಗಿ ಹಣದ ಅಗತ್ಯವಿದ್ದ ಬಡ ಬ್ರಾಹ್ಮಣನೊಬ್ಬನು ಬಂದು ಅನ್ನಮಾಚಾರ್ಯರ ಆಶೀರ್ವಾದವನ್ನು ಪಡೆಯುತ್ತಿದ್ದ ಹಾಗೆಯೇ, ತನಗೆ ಬೇಕಾದ ಧನಸಹಾಯವನ್ನು ಹೊಂದಿದನು. ಹೇಗೆಂದರೆ, ಆ ದಾರಿಯಲ್ಲಿ ಹೋಗುತ್ತಿದ್ದವರೊಬ್ಬರು ಈ ಉದ್ದೇಶಕ್ಕಾಗಿ, ಸ್ಥಳವಲ್ಲಿಯೇ ಉದಾರ ದೇಣಿಗೆ ನೀಡಿದರು. ಹೀಗಾಗಿ ಸಹಾಯಾರ್ಥಿಗಳು, ಅನ್ನಮಾಚಾರ್ಯರ ದಯಾಪೂರ್ಣ ನೆರವಿನ ಮೂಲಕ ತಮ್ಮ ಸಂಕಟಗಳಿಂದ ಬಿಡುಗಡೆ ಹೊಂದಲೆಂದು, ಅವರನ್ನು ಸುತ್ತುವರಿಯಲಾರಂಭಿಸಿದರು.

ಅನ್ನಮಾಚಾರ್ಯರ ವೃದ್ಧಾಪ್ಯದಲ್ಲಿ, ಕರ್ನಾಟಕದ ಹೆಸರಾಂತ ಸಂತ-ಕವಿಗಳಾದ ಪುರಂದರದಾಸರ ಭೇಟಿಯು ತಿರುಪತಿಯಲ್ಲಿ ಅಥವಾ ವಿಜಯನಗರದಲ್ಲಿ ಆಯಿತೆಂದು ತೋರುವುದು. ಹಾಗೂ ಈ ಇಬ್ಬರೂ ವಿಷ್ಣು ಭಕ್ತರು ಪರಸ್ಪರ ಭೇಟಿಯಾದದ್ದರಿಂದ ಉಲ್ಲಸಿತರಾದರು ಮತ್ತು ತಮ್ಮ ರಚನೆಗಳ ಬಗೆಗೆ ಸಮಾಲೋಚಿಸಿದರೆಂದೂ ತಿಳಿಯುತ್ತದೆ. ಪುರಂದರ ದಾಸರು ಆ ಕಾಲಕ್ಕೆ ತರುಣ ವಯಸ್ಸಿನವರಾಗಿರಬೇಕು. ಅವರ ಕೃತಿಗಳಲ್ಲಿ ಒಂದಾದ "ಶರಣು ಶರಣು ಸುರೇಂದ್ರ ವಂದಿತ" ಗೀತೆಯು ಅನ್ನಮಾಚಾರ್ಯರ ಜನಪ್ರಿಯ "ಶರಣು ಶರಣು ಸುರೇಂದ್ರ ಸನ್ನುತ" ಎಂಬ, ದಕ್ಷಿಣ ಭಾರತದಲ್ಲಿ ಸಮೂಹ ಗಾನದಲ್ಲಿ ವ್ಯಾಪಕವಾಗಿ ಬಳಸುವ, ಗೀತೆಯನ್ನು ಬಹುಮಟ್ಟಿಗೆ ಹೋಲುತ್ತದೆ. ಆದರೆ, ಪುರಂದರರ ಗೀತೆಯು ಅಹೋಬಲದ ಶ್ರೀ ನಾರಸಿಂಹನನ್ನು ಕುರಿತಾದುದಾಗಿದ್ದು, ಅನ್ನಮಾಚಾರ್ಯರ ಸ್ತುತಿಯು, ಶ್ರೀ ವೆಂಕಟೇಶ್ವರನನ್ನೇ ಕೇಂದ್ರವಾಗಿ ಹೊಂದಿದೆ.

ಅನ್ನಮಾಚಾರ್ಯರು ಬಹು ವೃದ್ಧಾಪ್ಯ ವಯಸ್ಸಿನವರೆಗೂ ಜೀವಿಸಿದ್ದರು ಹಾಗೂ ಶ್ರೀ ವೆಂಕಟೇಶ್ವರನ ಪ್ರಧಾನ ಸ್ತುತಿಕಾರ (ಸಂಕೀರ್ತನಾಚಾರ್ಯ)ರಾಗಿ, ತಮ್ಮ ಅಖಂಡ-ಸೇವೆಯ ಬಗೆಗೆ, ಸಂತೃಪ್ತಿಯ ಹಿನ್ನೋಟ ಹೊಂದಿದವರಾಗಿದ್ದರು. ಅವರು ಹಲವು ವರ್ಷಗಳ ಅವಧಿಯಲ್ಲಿ 32,000 ಗೀತೆಗಳನ್ನು ರಚಿಸಿದರೆಂದು ಅವರ ಸಂತತಿಯವರು ಹೇಳುತ್ತಾರೆ. ತಮ್ಮ ಮಕ್ಕಳು ಹಾಗೂ ಮೊಮ್ಮಕ್ಕಳು ವಿಷ್ಣುವಿನ ಆರಾಧನೆಯಲ್ಲಿ ತಮ್ಮ ಹಾದಿಯನ್ನು ಅನುಸರಿಸಿದುದನ್ನು ಹಾಗೂ ಸೃಜನಶೀಲ ಬರಹಗಾರರಾಗಿ ಸ್ವಯಂ ಪ್ರಸಿದ್ಧರಾದುದನ್ನೂ ಕಂಡು ಅವರು ಸಂತೋಷಿಸಿದರು. ತಮ್ಮ ಮೊಮ್ಮಕ್ಕಳಲ್ಲಿ ಒಬ್ಬನಾಗಿದ್ದ ಚಿನ್ನತಿರುಮಲಾಚಾರ್ಯನಿಗೆ ಬ್ರಹ್ಮೋಪದೇಶವನ್ನೂ ನೆರವೇರಿಸಿದರೆಂದು ತಿಳಿದುಬಂದಿದೆ. ನಂಬಲರ್ಹ ಶಾಸನಗಳ ಆಧಾರದಂತೆ, ಭಗವಂತನಿಗೆ ಪ್ರತಿದಿನವೂ ಒಂದು ಹೊಸ ಪದ್ಯವನ್ನು ಅರ್ಪಿಸುವ ಪವಿತ್ರ ಕಾರ್ಯವನ್ನು ತಮ್ಮ ಮಗ ಪೆದ್ದ ತಿರುಮಲಾಚಾರ್ಯನಿಗೆ ವಹಿಸಿಕೊಟ್ಟರು. ಅವರು ಫೆಬ್ರುವರಿ 23, 1503ರಲ್ಲಿ ನಿಧನರಾದರು.

ಅನ್ನಮಾಚಾರ್ಯರು ಜೀವನವನ್ನು ನಟನೆಗಳು[16] ಹಾಗೂ ವಿಫಲ ಪ್ರಯೋಗಗಳಿಂದ ಕೂಡಿದ ಒಂದು ನಾಟಕ ಪ್ರದರ್ಶನವೆಂದು ಯಾವಾಗಲೂ ನಂಬಿದ್ದರು. ಹಾಗೂ ಭಗವಂತನ ಸಾಮ್ರಾಜ್ಯವನ್ನು ಹೊಗುವುದೇ ಮಾನವ ಜೀವಿತದ ಪರಮ-ಧ್ಯೇಯವೆಂಬ ದೃಢ-ವಿಶ್ವಾಸದಿಂದ, ಒಂದು ಗಳಿಗೆಯೂ ಕೂಡ ವಿಚಲಿತರಾಗಲಿಲ್ಲ. ಈ ಭಾವವನ್ನು ಅವರು ಸಾಕಷ್ಟು ಪ್ರಬಲವಾಗಿಯೇ ತಮ್ಮ ಪ್ರಸಿದ್ಧ ಪದ್ಯಗಳೊಂದರಲ್ಲಿ ಧ್ವನಿಸಿದ್ದಾರೆ.

ಭೂಮಿಯ ಮೇಲಿನ ಜೀವಿತವು
ಭೂಮಿಕೆಯ ಅಭಿನಯವು
ಬೇರೆ ಏನಿಲ್ಲವು,
ದೇವಲೋಕವೆಂಬುವದು
ಅವಿರತ ಮಡಿಮೆಯ ಫಲವು.

ಖಂಡಿತವೋ, ಒಬ್ಬನ ಜನನ
ನಿಶ್ಚಿತವೋ, ಆತನ ಮರಣ
ಆತನ ಹುಟ್ಟುಸಾವುಗಳ ನಡುವೆ
ಸಾಗಿ-ಹೋಗುವ ಪ್ರದರ್ಶನ
ಕೇವಲ ರಂಗದ ಮೇಲಿನ ನಟನ.

ಆತನ ಸುತ್ತುವರಿದಿಹುದು
ಕಂಗಳಿಗೆ ಕಾಣುವ ಜಗವು,
ಅದರಾಚೆಗಿದೆ-ಸ್ವರ್ಗಲೋಕವು,
ನಿಜವಾದ ಅಂತಿಮ ಗುರಿಯು

ಅನ್ನವನು ತಿನ್ನುವುದು,
ವಸ್ತ್ರವನು ಉಡುವುದು
ಒಲು ನಿಶ್ಚಿತವು
ಉಳಿದುದೆಲ್ಲವು-
ಕೇವಲ ಅಭಿನಯವು

ಪುಣ್ಯ-ಪಾಪಗಳೆರಡನೂ
ಮೀರಿ ನಿಂತಾಗಲೇ
ದೊರಕುವುದು ನಾಕವು.

ಅಂತ್ಯವಿಲ್ಲವು ಒಬ್ಬನ ಪಾಪಕೆ
ಅಂತೆಯೋ ಆತನ ಸುಕೃತಕೆ
ನಗುವುದು ಕಾಲ, ನರನೆಡೆಗೆ ನೋಡಿ
ನಡೆಯುವುದು, ಮುಂದು-ಮುಂದಕೆ

ಸಾಗುವುದು ಆಟ, ಎಂದಿನಂತೆಯೇ

ಮೇಲೆ ನೆಲಸಿಹನು
ಎಲ್ಲರಿಗೂ ಮಿಗಿಲಾದವನು
ದೇವ, ವೆಂಕಟಾಚಲನು
ಮುಗಿಲಿನಾಚೆಗಿರುವುದು
ಆ ದೇವಲೋಕವು.

ಅನ್ನಮಾಚಾರ್ಯರು, ತಮ್ಮ ಪಾತ್ರದ ರಂಗಾಭಿನಯವನ್ನು ಪೂರ್ಣ ನೈಪುಣ್ಯದಿಂದ ನಿರ್ವಹಿಸಿದರೆಂಬುದು ನಿಶ್ಚಿತವಾದ ಸಂಗತಿ. ನಿಗದಿತವಾದ ಸಮಯವು ಸಮೀಪಿಸಿದಾಗ ಅವರು ತಮ್ಮ ಸಾಧನೆಯು ಪರಿಪೂರ್ಣವಾಯಿತೆಂಬ ಸಾರ್ಥಕ ಮನೋಭಾವದೊಡನೆ ರಂಗದಿಂದ ಅಂತಿಮವಾಗಿ ನಿರ್ಗಮಿಸಿದರು.

೩

# ಹರಕೆಯ ಸಮರ್ಪಣೆ

ಮಾನವನು ದೈವೀಶಕ್ತಿಯ ಅಸ್ತಿತ್ವವನ್ನು ಎತ್ತಿಹಿಡಿಯುತ್ತಾ ಅದನ್ನು ಉದ್ದೇಶಿಸಿ ಮಾಡಿಕೊಂಡ ಪ್ರಾರ್ಥನೆಗಳ ಪೈಕಿ, ಮೊತ್ತ ಮೊದಲನೆಯದಾಗಿ ದಾಖಲಾಗಿರುವುದು, ನಿಸ್ಸಂದೇಹವಾಗಿ, ಋಗ್ವೇದದ ಸ್ತೋತ್ರಗಳು. ಅವುಗಳನ್ನು ಹರ್ಷೋಲ್ಲಾಸದ ಸ್ಥಿತಿಯಲ್ಲಿ ಮೊದಲ ಬಾರಿಗೆ ಉದ್ಗರಿಸಿದ ನಿವೇದಕರು ಆ ಕಾವ್ಯ-ಕೃತಿಗಳನ್ನು ಕೇವಲ ಪಠಿಸುವುದಕ್ಕಿಂತ, ಹಾಡುವುದರಿಂದಲೇ ದೇವರನ್ನು ಇನ್ನೂ ಆನಂದವಾಗಿ ಒಲಿಸಿಕೊಳ್ಳಬಹುದೆಂಬುದನ್ನು ಬೇಗನೇ ಅರಿತುಕೊಂಡರು. ಆದ್ದರಿಂದ ಅವರು ಆ ಸ್ತೋತ್ರಗಳನ್ನು ಸಂಗೀತಕ್ಕೆ ಹೊಂದಿಸಿ, ಸಾಮವೇದವನ್ನು ಸೃಷ್ಟಿಸಿದರು. ಹಾಗೂ ಭರತನ ನಾಟ್ಯಶಾಸ್ತ್ರವು ಹೇಳುವಂತೆ, ಬ್ರಹ್ಮನು ಅದರಿಂದಲೇ ಸಂಗೀತದ ಕಲೆ ಹಾಗೂ ವಿಜ್ಞಾನಗಳೆರಡನ್ನೂ ಒಡಮೂಡಿಸಿದನು. ಹೀಗಾಗಿ, ನಾಗರಿಕತೆಯ ಉದಯ ಕಾಲಕ್ಕೇ ಸಂಗೀತದ ಶಕ್ತಿಯು ಭಕ್ತಿಗೆ ಜೀವ ತುಂಬುವ ಸಾಧನವಾಗಿ ಗುರುತಿಸಲ್ಪಟ್ಟಿತು. "ವೇದಗಳ ಪೈಕಿ ತಾನು ಸಾಮವೇದ"[17] ಎಂದು ಅರ್ಜುನನಿಗೆ ಕೃಷ್ಣನು ಹೇಳಿದ ಮಾತು ಈ ನಂಬಿಕೆಯನ್ನು ನಿಚ್ಚಳವಾಗಿ ಒತ್ತಿ ಹೇಳಿದೆ.

ಆದ್ದರಿಂದ, ವಿಷ್ಣು ಸ್ತುತಿ(ಕೀರ್ತನೆ)ಗಳ ಹಾಡುವಿಕೆಯು, ಭಾಗವತ ಪುರಾಣದ,[18] ಪ್ರಹ್ಲಾದ-ಪ್ರಸಂಗದಲ್ಲಿ ನಿರೂಪಿತವಾಗಿರುವ 'ನವರಸಭಕ್ತಿ'ಗಳ ಪೈಕಿ ಒಂದೆಂದು ಅತ್ಯಂತ ಸೂಕ್ತವಾಗಿ ಉಲ್ಲೇಖಿತವಾಗಿದೆ. ವಾಸ್ತವವಾಗಿ, ಭಕ್ತಿ ಪ್ರಾಧಾನ್ಯತೆಯನ್ನು ಕುರಿತಾದ ಆ ಸ್ಮರಣೀಯ ಕೃತಿಯು, ಕಲಿಯುಗವು ಅನೇಕ ನ್ಯೂನತೆಗಳಿಂದ ಕೂಡಿದ್ದರೂ ಸಹಾ, ತನ್ನ ಕಾಲದಲ್ಲಿ ಕೃಷ್ಣ ಮಹಿಮೆಯ ಗಾಯನ ಮಾತ್ರದಿಂದಲೇ ಮಾನವನು ಸ್ವರ್ಗ-ಸಾಧನೆ ಮಾಡಿಕೊಳ್ಳಬಹುದಾದ ಪರಮೋನ್ನತ ಗುಣವೊಂದನ್ನು ಹೊಂದಿದೆಯೆಂದು ಸಾರುತ್ತದೆ.[19] ಈ ಗಾಯನ ಪದ್ಧತಿಯು, ಭಕ್ತಿ ಪ್ರಸಾರ ಹಾಗೂ ಭಾಗವತ ಸಂಪ್ರದಾಯಗಳ ಆರಂಭದೊಡನೆ, ದೇಶವಿಡೀ ವ್ಯಾಪಿಸಿತು. ಆ ಕಾಲಕ್ಕೆ ದಕ್ಷಿಣದ ವಿಷ್ಣು ದೇಗುಲಗಳಲ್ಲಿ ವಿಧಿತವಾಗಿದ್ದ ಆಳ್ವಾರರ ತಮಿಳು ಪದ್ಯಗಳ ಹಾಡಿಕೆಯು, ಆ ಪ್ರದೇಶದ ಇತರ ಭಾಷೆಗಳಲ್ಲಿಯೂ ಸಹ ಅದೇ ರೀತಿಯ ಭಕ್ತಿಗೀತೆಗಳನ್ನು ರಚಿಸಲು ಕವಿಗಳನ್ನು ಪ್ರೇರೇಪಿಸಿತೆಂದು ತೋರುತ್ತದೆ. ಉದಾಹರಣೆಗೆ, ಶ್ರೀರಂಗಪಟ್ಟಣದ ವಿಷ್ಣು ಮಂದಿರದಲ್ಲಿ ಹಾಡಲಾಗುತ್ತಿದ್ದ ಆಳ್ವಾರರ ಭಕ್ತಿಗೀತೆಗಳನ್ನು ಕರ್ನಾಟಕದ ಸಂತಕವಿ

ಶ್ರೀಪಾದರಾಯರು ಗಮನಿಸುತ್ತಿದ್ದುದೇ, ಅಂತಹ ಪದ್ಯಗಳನ್ನು ಅವರು ಕನ್ನಡದಲ್ಲಿಯೂ ರಚಿಸಲು ಸಾಕಷ್ಟು ಕಾರಣ ಎಂದು ಹೇಳಲಾಗುತ್ತಿದೆ. ಹಾಗೂ ಅನ್ನಮಾಚಾರ್ಯರು ಅವರ ರಚನೆಗಳಷ್ಟೇ ಅಲ್ಲದೆ, ಆಳ್ವಾರರ ಗೀತೆಗಳೊಡನೆಯೂ ನಿಕಟತೆಯಿದ್ದುದರಿಂದ ತೆಲುಗಿನ ಮೊದಲ ವಾಗ್ಗೇಯಕಾರರಾದರು.

ಶಾರ್ಙದೇವನು ತನ್ನ 'ಸಂಗೀತ-ರತ್ನಾಕರ'ದಲ್ಲಿ, ಗೀತೆಯೊಂದರ ವಾಕ್ ಮತ್ತು ಗೇಯ (ಸಾಹಿತ್ಯ ಹಾಗೂ ಸಂಗೀತ) ಎರಡನ್ನೂ ಸೃಜಿಸಬಲ್ಲಾತನೇ 'ವಾಗ್ಗೇಯಕಾರ'ನೆಂದು ಬಣ್ಣಿಸಿದ್ದಾನೆ. ಆತನು, ಪದ್ಯ ರಚಿಸಬಲ್ಲ ಕವಿಯೂ ಹಾಗೂ ಅದನ್ನು ರಾಗಕ್ಕೆ ಹೊಂದಿಸುವ ಸಂಗೀತಗಾರನೂ ಒಟ್ಟಿಗೇ ಆಗಿದ್ದುದರಿಂದಲೇ 'ಉಭಯಕಾರ'ನೆಂದೂ ಕರೆಯಿಸಿಕೊಳ್ಳುವನು. ಅನ್ನಮಾಚಾರ್ಯರು ಸಹಸ್ರಾರು ಭಕ್ತಿಗೀತೆಗಳನ್ನು ರಚಿಸಿ ಹಾಡಿದುದಲ್ಲದೇ, ಆ ವಿಷಯದ ಮೇಲೆ 'ಸಂಕೀರ್ತನ ಲಕ್ಷಣಂ' ಎಂಬ ಹೆಸರಿನ ನಿಬಂಧ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದು, ತಮ್ಮ ಅರಿವು-ಅಭ್ಯಾಸಗಳ ಮೂಲಕ ಅನೇಕ ತಲೆಮಾರುಗಳ ತೆಲುಗು ಕವಿಗಳಿಗೆ ಸ್ಫೂರ್ತಿಯನ್ನೊದಗಿಸಿದರು.

ಚಿನ್ನಣ್ಣನು ತನ್ನ ತಾತನ ಜೀವನವೃತ್ತಾಂತದಲ್ಲಿ, ಅನ್ನಮಾಚಾರ್ಯರು ಹಲವು ವರ್ಷಗಳ ಅವಧಿಯಲ್ಲಿ ಮೂವತ್ತೆರಡು ಸಾವಿರ ಗೀತೆಗಳನ್ನು ರಚಿಸಿದರೆಂದು ಖಚಿತವಾಗಿ ಹೇಳುತ್ತಾನೆ. ಈ ಸಂಖ್ಯೆಯು ನಂಬಲಾಗದುದೆನಿಸಿದರೂ ಅವನ ಹೇಳಿಕೆಯನ್ನು ಹಲವಾರು ಕಾರಣಕ್ಕಾಗಿ ಉತ್ಪ್ರೇಕ್ಷೆಯೆಂದು ಉಪೇಕ್ಷಿಸಲಾಗದು. ಅನ್ನಮಾಚಾರ್ಯರಿಗೆ, ಅವರು ಕೇವಲ ಹದಿನಾರು ವರ್ಷದವರಾಗಿದ್ದಾಗಲೇ ತಮ್ಮ ಇಷ್ಟದೇವ ಶ್ರೀ ವೆಂಕಟೇಶ್ವರನ ರಹಸ್ಯ ದರ್ಶನದ ಅನುಗ್ರಹವಾಗಿತ್ತೆಂದು, ಹದಿನಾರನೇ ಶತಮಾನದ ತಾಮ್ರಶಾಸನದ ಬರಹವೊಂದು ತಿಳಿಸುತ್ತದೆ. ಹಾಗೂ ಈ ಆನಂದಾನುಭವವು, ತಮ್ಮ ಉಳಿದ ಜೀವಿತಾವಧಿಯಲ್ಲಿ ಪ್ರತಿದಿನವೂ ದೇವಸ್ತುತಿಯ ಒಂದಾದರೂ ಪದ್ಯವನ್ನು ರಚಿಸುವ ಸಂಕಲ್ಪ ಮಾಡುವಂತೆ ಅವರನ್ನು ಪ್ರೇರೇಪಿಸಿತು. ಅವರು ಮುಂದೆ ಸುಮಾರು ಎಂಭತ್ತು ವರ್ಷಗಳು ಜೀವಿಸಿದ್ದರು. ಅವರು ನಿಕಟ ಸಂಪರ್ಕ ಹೊಂದಿದ್ದ ತಿರುಪತಿ ದೇವಾಲಯವು ಅನೇಕ ಆಚರಣೆ-ಉತ್ಸವಗಳು, ವೈಭವ-ವಿಜೃಂಭಣೆಗಳಿಗೆ ಸದಾ ಹೆಸರಾಗಿತ್ತು. ಅಲ್ಲಿ ಪ್ರತಿನಿತ್ಯವೂ ಹಬ್ಬದ-ದಿನವಾದ ಕಾರಣ, ಯಾವುದೇ ದಿವಸವಾದರೂ ಮಾವಿನ ಹಸಿರೆಲೆಗಳ ತೋರಣವನ್ನು ಕಾಣಬಹುದಾಗಿತ್ತೆಂದು ಸೂಚಿಸುವ, ದೇವಸ್ಥಾನವನ್ನು ಕುರಿತಾದ 'ನಿತ್ಯ ಕಲ್ಯಾಣಂ -ಪಚ್ಚ ತೋರಣಂ' ಎಂಬ ಜನಜನಿತ ತೆಲುಗು ಹೇಳಿಕೆಯು ಶುದ್ಧ ಸತ್ಯವಾದುದಾಗಿದೆ. ಗಿರಿಯ ಮೇಲೆ ತಂಗಿದಾಗಲೆಲ್ಲ, ಅನ್ನಮಾಚಾರ್ಯರು ದೇವರಿಗೆ ಸಂಬಂಧಿಸಿದ ಎಲ್ಲಾ ಕಾರ್ಯಕ್ರಮಗಳಲ್ಲೂ ಭಕ್ತಿಯಿಂದ ಭಾಗವಹಿಸುತ್ತಿದ್ದರು ಹಾಗೂ ಆಗಾಗ ಸಂದರ್ಭಾಚರಣೆಗಾಗಿ ಆಶು ಕವಿತೆಗಳನ್ನು ರಚಿಸುತ್ತಿದ್ದರು. ಚಿನ್ನಣ್ಣನ ಪ್ರಕಾರ ಪ್ರತಿವರ್ಷವೂ ಬ್ರಹ್ಮೋತ್ಸವದ ಸಂದರ್ಭಕ್ಕೆ, ಆ ಸಮಯದಲ್ಲಿ ತಾವು ಎಲ್ಲಿಯೇ ಉಳಿದುಕೊಂಡಿದ್ದರೂ ಕೂಡ, ತಿರುಪತಿಗೆ ಭೇಟಿ ಕೊಡುವುದನ್ನೇ ಗುರಿಯಾಗಿಟ್ಟುಕೊಂಡಿದ್ದರು; ಮತ್ತು ಅವರ ಅನೇಕ ಗೀತೆಗಳು ಅದಕ್ಕೆ ಸಂಬಂಧಿಸಿದ

ಮೆರವಣಿಗೆಗಳನ್ನು ಬಣ್ಣಿಸುತ್ತವೆ. ಮಿಗಿಲಾಗಿ, ಅವರು ಅಹೋಬಲ ಮತ್ತು ವಿಜಯನಗರದಂತಹ ಸ್ಥಳಗಳನ್ನು ಆಗಾಗ ಸಂದರ್ಶಿಸಿ ಅಲ್ಲಿನ ಮತ್ತು ಮಾರ್ಗದಲ್ಲಿನ ಕ್ಷೇತ್ರಗಳ ದೇವರನ್ನು ಸ್ತುತಿಸುವ ಗೀತರಚನೆ ಮಾಡುತ್ತಿದ್ದರು. ಆದರೂ, ಪ್ರತಿ-ಪದ್ಯದ ಕೊನೆಗೂ ಆ ದೇವರನ್ನು ಶ್ರೀ ವೆಂಕಟೇಶ್ವರನೊಂದಿಗೆ ಏಕೀಭವಿಸುವುದಕ್ಕೆ ತಪ್ಪುತ್ತಿರಲಿಲ್ಲ. ಈ ಸಂಗತಿಗಳ ದೃಷ್ಟಿಯಿಂದ, ಅವರು ತಮ್ಮ ಸುದೀರ್ಘ ಜೀವಿತಾವಧಿಯ ಬಹುತೇಕ ದಿನಗಳಲ್ಲಿ ದಿನಕ್ಕೆ ಒಂದಕ್ಕಿಂತ ಹೆಚ್ಚಿನ ಗೀತೆಗಳನ್ನು ಸಪ್ತಗಿರಿಯೊಡೆಯನ 'ಸಂಕೀರ್ತನಾಚಾರ್ಯ'ನಂತೆ ರಚಿಸಿದರೆಂದು ಊಹಿಸುವುದು ಸಕಾರಣವಾಗಿಯೇ ಇದೆ.

ಸ್ವಯಂ ಗೀತಕಾರನೆಂದು ಖ್ಯಾತನಾಗಿದ್ದ ಅವರ ಮಗ ಪೆದ್ದ ತಿರುಮಲಾಚಾರ್ಯನು ಆ ಪದ್ಯಗಳ ಮೌಲ್ಯವನ್ನು ಚೆನ್ನಾಗಿ ಅರಿತಿದ್ದು, ಅವುಗಳನ್ನು ತನ್ನದೇ ಕೆಲವು ಕೃತಿಗಳೊಡನೆ ತಾಮ್ರಫಲಕಗಳ ಮೇಲೆ ಕೆತ್ತಿಸುವ ಮೂಲಕ ಈ ಅಮೂಲ್ಯ ನಿಧಿಯನ್ನು ಸಂರಕ್ಷಿಸಲು ಹಾಗೂ ಅವನ್ನು ದೇವಾಲಯದ ಪ್ರಾಕಾರದಲ್ಲಿ 'ಸಂಕೀರ್ತನ ಭಂಡಾರ'ವೆಂಬ ಸಣ್ಣ ಕೋಣೆಯೊಂದರಲ್ಲಿ ಸಂಗ್ರಹಿಸಲೂ ಲಕ್ಷ್ಯವಹಿಸಿದನು. ತಾಮ್ರಫಲಕಗಳ ಸೂಕ್ತ ರಕ್ಷಣೆಗಾಗಿಯೂ ಮತ್ತು ದೇವಾಲಯದಲ್ಲಿ ನಿರ್ದಿಷ್ಟ ವಿಶೇಷ ಸಂದರ್ಭಗಳಂದು ಆ ಗೀತೆಗಳನ್ನು ಹಾಡಲು ಗಾಯಕರನ್ನು ನೇಮಿಸಿಕೊಳ್ಳಲೂ, ಉದಾರ ದತ್ತಿಗಳನ್ನು ನೀಡಿದನೆಂದು, ಅಲ್ಲಿ ದೊರೆತ ಕೆಲವಾರು ಶಾಸನಗಳು ಸೂಚಿಸುತ್ತವೆ.

ಸಾಹಿತ್ಯಕ ಕೃತಿಗಳನ್ನು ತಾಮ್ರಫಲಕಗಳ ಮೇಲೆ ಕೆತ್ತಿಸುವ ಮೂಲಕ ಅವುಗಳ ರಕ್ಷಣೆಯನ್ನು ಖಚಿತಪಡಿಸಿಕೊಳ್ಳುವ ಪದ್ಧತಿಯು, ತೆಲುಗು ಸಾಹಿತ್ಯದ ಸಂಬಂಧದ ಮಟ್ಟಿಗೆ, ತಾಳ್ಳಪಾಕ ಕುಟುಂಬದ ಸದಸ್ಯರಿಗೆ ಮಾತ್ರ ಸೀಮಿತಗೊಂಡಿತ್ತೆಂಬುದನ್ನು ಗಮನಿಸಬೇಕು. ಇಡೀ ದೇಶದಲ್ಲಿ ಕೂಡ, ಇದು ಪುರಾತನ ಕಾಲದಲ್ಲಿ ಬೌದ್ಧಧರ್ಮದ ಕೆಲವೇ ಧಾರ್ಮಿಕ ಪಠ್ಯ ಅಲ್ಲದೆ, ವೇದಗಳ ಮೇಲಣ ಸಾಯಣರ ಭಾಷ್ಯಗಳ[20] ಮಟ್ಟಿಗೆ ಮಾತ್ರ ಬಳಸಲ್ಪಟ್ಟಿದ್ದ ಅಸಾಧಾರಣ ಕ್ರಮವೆಂದು ತೋರುತ್ತದೆ. ಇದೊಂದು ದುಬಾರಿಯ ಪ್ರಯತ್ನವಾಗಿದ್ದು, ತಾಳ್ಳಪಾಕ ಕವಿಗಳ ವಿಷಯದಲ್ಲಿ ಅದು ಸಾಧ್ಯವಾದುದು ಪೆದ್ದ ತಿರುಮಲಾಚಾರ್ಯನ ರಾಜ-ಪೋಷಕ, ವಿಜಯನಗರ ಸಾಮ್ರಾಜ್ಯದ ಅರಸು ಅಚ್ಯುತರಾಯನ ಔದಾರ್ಯದಿಂದ.

ಅನ್ನಮಾಚಾರ್ಯರ ಪದ್ಯಗಳು, ತಿರುಪತಿ ದೇವಾಲಯದಲ್ಲಿ ನಿಯತವಾಗಿ ಹಾಡಲ್ಪಡುತ್ತಿದ್ದಾಗಲೂ ಮತ್ತು ದಕ್ಷಿಣದ ಪುದುಕೋಟೆಯಂತಹ ದೂರದ ಸ್ಥಳಗಳಲ್ಲಿ ಕೂಡಾ ಗೋಷ್ಠಿ ಗಾಯನಕ್ಕಾಗಿ ಭಕ್ತರಿಂದ ಬಳಸಲ್ಪಡುತ್ತಿದ್ದಾಗಲೂ, ಸುಮಾರು ಎರಡು ಶತಮಾನಗಳ ಕಾಲ ಅಪಾರ ಜನಪ್ರಿಯತೆಯನ್ನು ಗಳಿಸಿದ್ದುವೆಂದು ಸೂಚಿಸಲು ಆಧಾರವಿದೆ. ಆದರೂ ವಿವರಿಸಲಾಗದ ಕೆಲವು ಕಾರಣಗಳಿಂದ ಅವು ಕ್ರಮೇಣ ರೂಢಿಯಿಂದ ದೂರವಾದವು ಹಾಗೂ ಸಂತಕವಿಯ ಹೆಸರೂ ಸಹಾ ಮರೆತುಹೋಯಿತು. ಪ್ರಾಯಶಃ ಇದಕ್ಕೆ, ಕೇವಲ ಜನಪ್ರಿಯ ನುಡಿಗಟ್ಟಿನಲ್ಲಿ ಹಾಡುಗಳನ್ನು ಬರೆದ ಕವಿಯು ತಮ್ಮ ಗಮನ ಸೆಳೆಯಲು ಯೋಗ್ಯನಲ್ಲವೆಂದು ಭಾವಿಸಿದ ಹಿಂದಿನ ತೆಲುಗು ವಿದ್ವಾಂಸರ ಮೌನದ ಸಂಚೇ ಕಾರಣವಿರಬಹುದು.

ತಿರುಪತಿಯ ತಾಮ್ರಫಲಕಗಳಲ್ಲಿನ ಅವರ ಗೀತೆಗಳ ಅಸ್ತಿತ್ವವೂ ಸಹಾ ಜನರಿಂದ ಮರೆಯಲ್ಪಟ್ಟಿತ್ತೆಂದು ಕಾಣುತ್ತದೆ. ಕಾರಣ ಅವುಗಳನ್ನು ಕುರಿತ ಮೊತ್ತ ಮೊದಲ ಪ್ರಸ್ತಾಪವು ಲಭ್ಯವಾಗಿರುವುದೇ, ಸುಮಾರು ಮುನ್ನೂರು ವರ್ಷಗಳು ಕಳೆದ ನಂತರ, 19ನೇ ಶತಮಾನದ ಬ್ರಿಟಿಷ್ ನಾಗರಿಕ ಸೇವಕರೊಬ್ಬರು ಬರೆದ ಟಿಪ್ಪಣಿಯಲ್ಲಿ. ಕ್ರಿ.ಶ. 1816ರಲ್ಲಿ ಮದ್ರಾಸಿನಿಂದ ಪ್ರಕಟಗೊಂಡ, ತಮ್ಮ 'ತೆಲುಗು ಭಾಷೆಯ ವ್ಯಾಕರಣ'ದ ಪೀಠಿಕೆಯಲ್ಲಿ ಕ್ಯಾಂಪ್‌ಬೆಲ್‌ರು ಬರೆಯುತ್ತಾರೆ: "ತಿರುಪತಿಯ ಪವಿತ್ರ ಗಿರಿಯ ಮೇಲಣ ದೇವಾಲಯದಲ್ಲಿ ಬ್ರಾಹ್ಮಣ ಕುಟುಂಬವೊಂದರ ಶ್ರದ್ಧಾ-ರಕ್ಷೆಯಲ್ಲಿ ಕಾಯ್ದಿಟ್ಟ ಹಲವು ಸಾವಿರ ತಾಮ್ರಪತ್ರಗಳ ಮೇಲೆ, ಅಸಂಖ್ಯ ಗೀತೆಗಳನ್ನು ಕೆತ್ತಲಾಗಿದೆ ಎಂಬುದನ್ನು ಕೇಳಿದ ನಾನು ಅವುಗಳನ್ನು ಪರಿಶೀಲಿಸಲು ಸ್ಥಳೀಕನೊಬ್ಬನನ್ನು ನಿಯೋಜಿಸಿದೆ; ಆದರೆ ಪ್ರತಿ ಮಾಡಿಕೊಳ್ಳಲ್ಪಟ್ಟ, ವ್ಯಾಕರಣವನ್ನು ಕುರಿತಾದ ನಿಬಂಧವೊಂದನ್ನು ಬಿಟ್ಟರೆ, ಇಡೀ ಸಂಗ್ರಹವು ದೇವಸ್ತುತಿಯ ಸಂಪುಟಗಟ್ಟಲೆ ಗೀತೆಗಳನ್ನು ಮಾತ್ರವೇ ಒಳಗೊಂಡಿದ್ದುದಾಗಿ ಕಂಡುಬಂದಿತು."[21]

ಶ್ರೀ ವೆಂಕಟೇಶ್ವರ ದೇವಾಲಯದ ಆಡಳಿತವನ್ನು ನಿಯಂತ್ರಿಸುವ ತಿರುಪತಿ ತಿರುಮಲ ದೇವಾಲಯ ಸಮಿತಿಗೆ - ಆ ತಾಮ್ರಪತ್ರಗಳನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡು, ಪದ್ಯಗಳನ್ನು ಬರಹರೂಪಕ್ಕಿಳಿಸಿ, ಸಮರ್ಥ ವಿದ್ವಾಂಸರಿಂದ ಸಂಪಾದನೆಗೊಳಿಸಿ, ಹಲವಾರು ಸಂಪುಟಗಳಲ್ಲಿ ಅವುಗಳ ಪ್ರಕಟಣೆಯನ್ನು ಕೈಗೊಳ್ಳುವಲ್ಲಿ ಮತ್ತೆ ನೂರು ವರ್ಷಗಳು ಗತಿಸಬೇಕಾಯಿತು. ಈ ಪ್ರಕ್ರಿಯೆಯಲ್ಲಿ, ಮೂಲ ಸಂಗ್ರಹದಿಂದ ಸಂಖ್ಯೆ ನಮೂದಿಸಲಾಗಿದ್ದ ಹಲವಾರು ಫಲಕಗಳೇ ಕಣ್ಮರೆಯಾಗಿರುವುದನ್ನು, ಕಂಡುಹಿಡಿಯಲಾಯಿತು. ಅಂತಿಮವಾಗಿ, ಅನ್ನಮಾಚಾರ್ಯರ 14,358 ಪದ್ಯಗಳು[22] ಮಾತ್ರ ಪತ್ತೆಯಾಗಲು ಸಾಧ್ಯವಾಯಿತು. ಇದರ ಅರ್ಥವೇನೆಂದರೆ, ಅವರ ರಚನೆಗಳು ಹತ್ತೊಂಬತ್ತನೇ ಶತಮಾನದಲ್ಲಿ ಶೋಧಿತಗೊಂಡ ನಂತರ, ಒಂದು ಮೂಲದಿಂದ ಮತ್ತೊಂದಕ್ಕೆ ವರ್ಗಾವಣೆಯಾಗುವ ಅವಧಿಯಲ್ಲಿ, ಅವುಗಳಲ್ಲಿ ಅರ್ಧಕ್ಕೂ ಹೆಚ್ಚಿನವು ನಷ್ಟವಾಗಿ, ಮುಂದಿನ ಪೀಳಿಗೆಗೆ ದೊರೆಯದಂತಾಯಿತು.

ಅನ್ನಮಾಚಾರ್ಯರ ಗೀತೆಗಳು ಎರಡು ಸ್ಥೂಲ ವಿಭಾಗಕ್ಕೆ ಸೇರ್ಪಡೆಯಾಗುತ್ತವೆ: ಶೃಂಗಾರ ಗೀತೆಗಳು ಮತ್ತು ಅಧ್ಯಾತ್ಮಿಕ ಗೀತೆಗಳು. ತಾಮ್ರಪತ್ರಗಳಲ್ಲಿನ ಅವರ ಎಲ್ಲ ಗೀತೆಗಳಿಗೂ, ಅವುಗಳ ಧ್ವನಿ ಹಾಗೂ ವಸ್ತುವಿನ ಪರಿಗಣನೆಯಿಲ್ಲದಂತೆ, 'ಸಂಕೀರ್ತನ' ಎಂಬ ಹಣೆಪಟ್ಟಿಯಿರುವುದೆಂಬ ಅಂಶವೇ ಅವೆಲ್ಲದರ ಮೂಲಭೂತ ಭಕ್ತಿಯ ಸ್ವರೂಪಕ್ಕೆ ಸ್ಪಷ್ಟ-ಸೂಚಿಯಾಗಿದೆ. ಕಾರಣ, ಕೀರ್ತನ ಮತ್ತು ಸಂಕೀರ್ತನ ಎಂಬ ಪದಗಳೇ, ಅವು ನೇರವಾಗಿ ಇಲ್ಲವೇ ಸೂಚ್ಯವಾಗಿ ಭಗವಂತನ ಮಹಿಮೆಯನ್ನೋ ಅಥವಾ ಪೂಜ್ಯರಾದ ಸಾಧುಸಂತರನ್ನೋ ಕೊಂಡಾಡುವ 'ಪವಿತ್ರ-ಪದ್ಯ'ಗಳೆಂಬ ಇಂಗಿತವನ್ನು ನೀಡುತ್ತವೆ. ಆ ಬಗೆಯ ಪದ್ಯಗಳು ಸರಳ ಸಂಗೀತ ಹಾಗೂ ಲಯವನ್ನು ತಪ್ಪದೆಯೇ ಹೊಂದಿರುತ್ತವೆ, ಏಕೆಂದರೆ ಅವುಗಳ ಸಂದರ್ಭದಲ್ಲಿ ಸಂಗೀತಕ್ಕಿಂತ ಸಾಹಿತ್ಯವೇ ಬಹು ಮುಖ್ಯವಾಗಿರುತ್ತದೆ.

ಅಂತಹ ಪದ್ಯಗಳು ಭಗವಂತನ ಬಗೆಗಿನ ಗಾಢಭಕ್ತಿಯಷ್ಟೇ ಅಲ್ಲದೇ ಮಾನವ-ಸಾಧನೆಯ ತಾಂತ್ರಿಕತೆ, ಕಾಲದ ವೇಗ-ಪ್ರಕೃತಿ ಹಾಗೂ ವ್ಯಕ್ತಿಯೋರ್ವನು ಮುಕ್ತಿಯನ್ನು ಖಾತರಿಗೊಳಿಸಿಕೊಳ್ಳಲು ಬೇಕಾದ 'ಸ್ವಯಂ ಶರಣಾಗತಿ'ಯ ತುರ್ತು-ಅಗತ್ಯ, ಈ ತೆರನ ವಿಷಯಗಳನ್ನೂ ಕುರಿತಾದ ಭಾವಾಲೋಚನೆಗಳ ವಿಶಾಲ ಪರಿಧಿಯನ್ನು ವ್ಯಾಪಿಸಿರುತ್ತವೆ ಎಂಬುದನ್ನೂ ಇಲ್ಲಿ ಸೇರಿಸಬೇಕು.

ಭಾರತೀಯ ಸಾಹಿತ್ಯದಲ್ಲಿ ಧಾರ್ಮಿಕ ಶೃಂಗಾರ-ಭಾವವು ಭಾಗವತ ಪುರಾಣದಷ್ಟೇ ಹಳೆಯದು. ಆ ಪುರಾಣವು ಕೃಷ್ಣನೊಂದಿಗೆ ಬೃಂದಾವನದ ಗೋಪಿಯರ ರಾಸಕ್ರೀಡೆಗಳ ಕಾವ್ಯಾತ್ಮಕ ವರ್ಣನೆಗಳ ಮೂಲಕ, ಪರಮಾತ್ಮನಿಗಾಗಿ ಮಾನವನ ಆತ್ಮವು ತೀವ್ರವಾಗಿ ಹಂಬಲಿಸುವ ರೂಪಕವನ್ನು, ಸಮರ್ಥವಾಗಿ ಪ್ರಸ್ತುತಪಡಿಸುತ್ತದೆ. ಆತನನ್ನು 'ಗೋಪಾಲ'ನೆಂದು ಕರೆದು, ಅದೇ ಸನ್ನಿವೇಶದಲ್ಲಿ ಗೋವುಗಳನ್ನು ಸರ್ವೋತ್ತಮ ದೇವನೆಡೆಗೆ ಸಾಗುತ್ತಿರುವ ಜೀವಾತ್ಮಗಳ ಸಂಕೇತವಾಗಿ ಸೂಚಿಸಲಾಗಿದೆ. ಗೋಪಿಯರ ಪೈಕಿ ಪ್ರಧಾನ ವ್ಯಕ್ತಿಯಾದ ರಾಧೆಯ ಹೆಸರು ಕೃತಿಯಲ್ಲಿ ಸೇರಿಲ್ಲವಾದರೂ, ಅವರ ಲೀಲಾ-ವರ್ಣನೆಗಳಲ್ಲಿ ಗೋಪಿಯರಲ್ಲೊಬ್ಬಳು ಆತನಿಗೆ ಅಚ್ಚುಮೆಚ್ಚಿನವಳಾಗಿದ್ದಳೆಂಬ ಇಂಗಿತವಿದೆ.

ಭಾಗವತ ಪುರಾಣದ 'ರಸ-ಪಂಚಾಧ್ಯಾಯಿ' ಪ್ರಕರಣದಲ್ಲಿ ಕಾಣಬರುವ ಸಂಕೇತಗಳ ಪೈಕಿ ಒಂದು, ರಾಧೆ ಮತ್ತು ಕೃಷ್ಣರ ಪ್ರಣಯ ಲೀಲೆಗಳಿಗೆ ಸಂಬಂಧಿಸಿದ ಪಂಥವಾಗಿ ಹೊರಹೊಮ್ಮಿ, ಯಾವುದನ್ನು ವೈಷ್ಣವ ನಿಬಂಧಗಳು ಧಾರ್ಮಿಕ ಶೃಂಗಾರ ಭಾವದ ಔನ್ನತ್ಯವಾದ 'ಮಧುರ ರಸ'ವೆಂದು, ಕಾವ್ಯಮೀಮಾಂಸೆಯಲ್ಲಿ ಬಣ್ಣಿಸಲಾಗಿರುವುದೋ, ಅದು ಶತಮಾನಗಳ ಕಾಲ ಭಾರತೀಯ ಕಾವ್ಯವಾಹಿನಿಯಲ್ಲಿ ತುಂಬಿ ಹರಿಯಿತು. ಅದರ ಮಹತ್ವವನ್ನು ವಿವರಿಸುತ್ತಾ ಶ್ರೀ ಅರವಿಂದರು ಹೇಳುತ್ತಾರೆ: "ಭಗವಂತನಿಗಾಗಿ ಆತ್ಮದ ಬಯಕೆಯು, ರಾಧಾ ಮತ್ತು ಕೃಷ್ಣರ ಕಾವ್ಯಮಯ ಪ್ರೇಮಚಕ್ರದ ಸಾಂಕೇತಿಕ ರೂಪದಲ್ಲಿ ಚಿತ್ರಿತವಾಗಿದೆ; ಪ್ರೇಮದ ಮೂಲಕವಾಗಿ ಸೌಂದರ್ಯದ ವಶವಾಗಿ, ಅದರಿಂದ ಜಯಿಸಲ್ಪಟ್ಟು, ಮಾಂತ್ರಿಕ ಕೊಳಲಿನಿಂದ ಆಕರ್ಷಿತಗೊಂಡು, ಸಾರ್ವಭೌಮ ಮೋಹಭಾವವೊಂದಕ್ಕಾಗಿ ಮಾನುಷವಾದ ಚಿಂತೆ-ಕರ್ತವ್ಯಗಳನ್ನು ತೊಡೆದು, ಮಿಲನದ ಆನಂದ-ವಿರಹವೇದನೆ-ನಿರಂತರ ಹಂಬಲಿಕೆ ಮತ್ತು ಪುನರ್ಮಿಲನ-ಪರಮಾತ್ಮನಿಗಾಗಿ ಮಾನವಾತ್ಮದ ಒಲವಿಗೆ ಲೀಲೆ-ಹೀಗೆ, ಅವರೋಹಣ ಕ್ರಮದಲ್ಲಿ ಈ ಸ್ಥಿತಿಗಳ ಮೂಲಕ ಹಾದು, ಮಾನವನಲ್ಲಿನ ಸಹಜ ಆತ್ಮವು ದೇವಾತ್ಮಕ್ಕಾಗಿ ಕಾತರಿಸುತ್ತದೆ."[23]

ಪ್ರೇಮವೆಂಬ ವಿಷಯವನ್ನು ಇಲ್ಲಿ ನಿರ್ವಹಿಸಿರುವ ರೀತಿಯು, ಲೌಕಿಕವಾಗಿ ತೋರುವುದನ್ನು ಪವಿತ್ರತಮವನ್ನಾಗಿಯೂ, ಪ್ರಬಲ ಲೈಂಗಿಕ ಆವೇಗವನ್ನು ತೀವ್ರ ಆಧ್ಯಾತ್ಮಿಕ ಪ್ರೇರಣೆಯೊಂದನ್ನಾಗಿಯೂ ಪರಿವರ್ತಿಸಿದೆ. ಶ್ರೀ ಸುಶೀಲ ಕುಮಾರ್ ಡೇ ಅವರು ವಿವರಿಸುತ್ತಾರೆ: "ಈ ಪ್ರವೃತ್ತಿಯು ಒಂದು ವಿಧವಾದ ಶೃಂಗಾರಾನುಭಾವವಾಗಿದ್ದು, ಧಾರ್ಮಿಕ ಅಪೇಕ್ಷೆಗಳನ್ನು ಲೌಕಿಕ ವ್ಯಾಮೋಹದ ಆಪ್ತ ಭಾಷೆಯಲ್ಲಿ, ಅಭಿವ್ಯಕ್ತಗೊಳಿಸಬಯಸುತ್ತದೆ. ಕಾರಣ, ಅದು ದೈವಿಕ ಪ್ರೇಮವನ್ನು

ಮಾನವ ಭಾವನೆಗಳ ಪ್ರತಿರೂಪವೆಂದು ಪರಿಗ್ರಹಿಸುತ್ತದೆ."[24] ಅದು ಪರಮ-ಸುಂದರ ಅಮರ ಕಾವ್ಯಗಳಿಂದ ಸಾಹಿತ್ಯವನ್ನು ಶ್ರೀಮಂತಗೊಳಿಸುತ್ತಲೇ ಧಾರ್ಮಿಕ, ಶೃಂಗಾರ ಹಾಗೂ ಸೌಂದರ್ಯ ಪ್ರಜ್ಞೆಯ ಅಂಶಗಳ ಸಮನ್ವಯವನ್ನೂ ಸಾಧಿಸುತ್ತದೆ.

ಭಾರತೀಯ ಅಲಂಕಾರ ಶಾಸ್ತ್ರಜ್ಞರು ಕೂಡಾ, ಸಾಹಿತ್ಯದ ಸಿದ್ಧಾಂತಗಳ ಬಗೆಗಿನ ತಮ್ಮ ವಿವರವಾದ ಚರ್ಚೆಯಲ್ಲಿ, ಭಾವಗಳ ಪೈಕಿ ಶೃಂಗಾರಕ್ಕೆ ಹೆಮ್ಮೆಯ ಸ್ಥಾನವನ್ನು ನೀಡಿದ್ದಾರೆ. ಹಾಗೂ ವಿವಿಧ ಬಗೆಯ ನಾಯಕ-ನಾಯಕಿಯರು, ಅವರ ರಸಿಕ ಬಾಂಧವ್ಯಗಳಲ್ಲಿ ವಿಸ್ತೃತ ವರ್ಗೀಕರಣವನ್ನೂ ಮುಂದು ಮಾಡಿದ್ದಾರೆ. ಉದಾಹರಣೆಗೆ, ಭಾರತದ ಶಾಸ್ತ್ರೀಯ ನಾಟಕದ ಸಿದ್ಧಾಂತಕಾರರು, ನಾಯಕನೊಂದಿಗಿನ ನಾಯಕಿಯ ಸಂಬಂಧದ ಎಂಟು ಶೈಲಿಯ ಮಾನಸಿಕ ಸ್ಥಿತಿಗಳನ್ನು ಬಣ್ಣಿಸುತ್ತಾರೆ;

ಸ್ವಾಧೀನ-ಪತಿಕಾ: ನಲ್ಲನನ್ನು ಸಂಪೂರ್ಣ ತನ್ನ ವಶದಲ್ಲಿಟ್ಟುಕೊಂಡಿರುವ ಮಹಿಳೆ.

ವಾಸಕಾ-ಸಜ್ಜಿಕಾ: ಇನಿಯನ ನಿರೀಕ್ಷೆಯಲ್ಲಿ ತನ್ನನ್ನೂ, ತನ್ನ ಶಯ್ಯಾಗೃಹವನ್ನೂ ಸಿಂಗರಿಸಿಕೊಂಡಿರುವವಳು.

ವಿರಹೋತ್ಕಂಠಿತಾ: ತಪ್ಪಿತಸ್ಥ ಪ್ರಿಯಕರನ ಬಾರದಿರುವಿಕೆಯಿಂದ ನಿರಾಶಳಾದವಳು.

ವಿಪ್ರಲಬ್ಧಾ: ಇನಿಯನ ಉದ್ದೇಶಪೂರ್ವಕ ಅಪ್ರಾಮಾಣಿಕತೆಯಿಂದಾಗಿ ವಂಚಿತಳಾದವಳು.

ಖಂಡಿತಾ: ಪ್ರಿಯನ ದೇಹದ ಮೇಲೆ ಆತನ ನಿಷ್ಠಾರಾಹಿತ್ಯದಿಂದಲೇ ಉಂಟಾದ ಗುರುತುಗಳನ್ನು ಕಂಡುಕೊಂಡ, ಅನ್ಯಾಯಕ್ಕೊಳಗಾದವಳು.

ಕಲಹಂತರಿತಾ: ಪ್ರೇಮ-ಕಲಹದಲ್ಲಿ ತನ್ನ ಬಿಗಿ ನಿಲುವಿನಿಂದಾಗಿ ನಲ್ಲನಿಂದ ಅಗಲಿದವಳು.

ಪ್ರೋಷಿತ-ಭರ್ತೃಕಾ: ಹೊರನಾಡಿಗೆ ಹೋಗಿರುವ ಪ್ರಿಯಕರನಿಗಾಗಿ ಸೊರಗುತ್ತಿರುವವಳು.

ಅಭಿಸಾರಿಕಾ: ಒಲಿದವನನ್ನು ಭೇಟಿಮಾಡಲು ಮೊದಲೇ ಗೊತ್ತಾದ ಜಾಗಕ್ಕೆ ಹೋಗುವವಳು.

ಅನ್ನಮಾಚಾರ್ಯರು ಶಾಸ್ತ್ರೀಯ ಅಲಂಕಾರಿಕರ ಕೃತಿಗಳಲ್ಲಿನ ನಾಯಿಕೆಯರ ಈ ವರ್ಗೀಕರಣದಷ್ಟೇ,[25] 'ಭಾಗವತ ಪುರಾಣ'ದಲ್ಲಿನ ಹಾಗೂ ಜಯದೇವನ 'ಗೀತಗೋವಿಂದ' ದಲ್ಲಿನ ಗೋಪಿಯರು ಮತ್ತು ಕೃಷ್ಣನ ಚಿತ್ರಣದೊಂದಿಗೂ ಪರಿಚಿತರಾಗಿದ್ದರು. ಹಾಗೂ ಅವರ ಶೃಂಗಾರ ಗೀತೆಗಳಲ್ಲಿ ಈ ಎಂಟೂ ಬಗೆಗಳ ಉದಾಹರಣೆಗಳನ್ನು ಸುಲಭವಾಗಿ ನೋಡಬಹುದು. ವಾಸ್ತವವಾಗಿ, ತಮ್ಮ ಪ್ರೇಮಿಗಳೊಂದಿಗಿನ ಪ್ರಣಯ-ಸಂಬಂಧವಾಗಿ ನಾಯಿಕೆಯರ ಎಂಟೂ ವಿಧದ ಮನಸ್ಥಿತಿಯಲ್ಲಿ ಒಂದೊಂದನ್ನೂ ಚಿತ್ರಿಸಿರುವ ಹಲವು ಗೀತೆಗಳನ್ನು ಕಾಣಬಹುದು; ಅಷ್ಟು ಸಮಗ್ರವಾಗಿತ್ತು, ಅವರ ಸೃಷ್ಟಿ. ಅದಾಗ್ಯೂ, ಶೃಂಗಾರ ಕ್ಷೇತ್ರದಲ್ಲಿ ತಮ್ಮ ಹಿಂದಿನ ಖ್ಯಾತನಾಮರ ಸಿದ್ಧಾಂತ ಮತ್ತು ಪ್ರಯೋಗಗಳ ನಿಕಟ ಪರಿಚಯವು ಅವರಿಗಿದ್ದುದು

ಪೂರ್ಣಸಿದ್ಧವಾಗಿದ್ದರೂ, ನಾಯಿಕೆಯ ಮನೋಸ್ಥಿತಿಯ ಚಿತ್ರಣದಲ್ಲಿ, ಕೆಲವು ವೇಳೆ ಅವರುಗಳು ತಲುಪಿದ್ದ ಗಡಿಯಾಚೆಗೂ ದಾಟಿ ಹೋಗಿ, ಸ್ವಂತಿಕೆಯನ್ನು ಮರೆದಿರುವುದನ್ನು ಇಲ್ಲಿ ಗಮನಿಸಲೇಬೇಕು. ಹಾಗೂ ಅವರ ಗೀತೆಗಳು ಹಂಬಲಿಕೆ ಮತ್ತು ಸಿದ್ಧಿ, ಅಗಲಿಕೆಯ ದುಃಖ ಮತ್ತು ಸಮ್ಮಿಲನದ ಸುಖಗಳೆರಡರೊಂದಿಗೂ ಸಮಾನ ಭಾವದಿಂದಲೇ ವರ್ತಿಸುತ್ತವೆ.

ಅವರ ಕಲ್ಪನೆಯು ಎಷ್ಟು ಸಮೃದ್ಧವಾಗಿತ್ತೆಂದರೆ, ಸಾಂಪ್ರದಾಯಕ ಉಪಮೆಗಳನ್ನು ಬಳಸಿಕೊಳ್ಳುವಾಗಲೂ, ಅವರು ಪಾತ್ರವೊಂದರ ಚಿತ್ರಣ ಅಥವಾ ಸನ್ನಿವೇಶವೊಂದರ ಬಣ್ಣನೆಯಲ್ಲಿ ಚೇತೋಹಾರಿಯಾದ ವಿಭಿನ್ನತೆಯನ್ನು ಪದೇ, ಪದೇ ಪ್ರಸ್ತುತ ಪಡಿಸಬಲ್ಲರು:-

ವನಿತೆಯವಳ ಯೌವ್ವನವು
ದೇವನಾತನ
ಸುಖ ಸಾಮ್ರಾಜ್ಯವನು
ಕಾಯ್ವ ದುರ್ಗವೇ, ನಿಜವು

ತರುಣಿಯ ವಾರೆನೋಟವೋ
ಆತನ ಮನವನಾವರಿಸಿದ
ಕತ್ತಲೆಯ ಕಳೆವ
ಕೋಲ್ಮಿಂಚಿನ ಸೆಳಕು

ಲಲನೆಯವಳ ಚೆಲುಮೊಗವು
ದೇವನಾತನ ವಿಶಾಲ
ಕಮಲ ಕಂಗಳನರಳಿಸುವ
ಹೊಳೆ ಹೊಳೆವ ಚಂದ್ರಿಕೆಯು

ಜೇನ್ಮೊಣವ ಹೋಲ್ವ ಅವಳ ಕುರುಳು
ತಾ ಹೆಣೆದಿರುವುದು ಮುಸುಕಿನ ತೆರೆಯು,
ತನ್ನ ಕಾಂತನಿಗೆ
ಏಕಾಂತತೆಯನೊದಗಿಸಲೆಂದು

ರಮಣಿಯ ನಳಿದೋಳ್ಗಳೋ
ತನ್ನ ದೇವನ ಒಲವಿನ
ಲತೆಯು ಹಬ್ಬಿ ಹರಡಲು
ಆಸರೆಯಾದ, ಮೃದು ಬಳ್ಳಿಗಳೇ ತಾವು

ಅವಳ ಮುಖ ಕಮಲ ಚೆಲುವಿಕೆಯೋ
ಶ್ರೀ ವೆಂಕಟೇಶನ ಕರುಣಾರಸವನು

ಉಪ್ಪಗಲಕ್ಕೂ ಚೆಲ್ಲುವ
ಘಳಗುಟ್ಟುವ, ಕರಗಿದ ಹೊನ್ನ ಜಲವು

ಹರಿಣಾಕ್ಷಿಯ ಪ್ರೇಮಂದಿರವದು
ಪ್ರೇಮದೇವನ ರಚನೆಯು,
ಪ್ರಭುವಿನ ಮೋಹಾನುರಾಗವನು
ಪೊರೆಯಲೆಂದೇ ತಾ ವಿನ್ಯಾಸಗೊಂಡಿಹುದು

ಈ ಗೀತೆಯು ಹಲವು ಸಾಂಪ್ರದಾಯಕ ಪ್ರತಿಮೆಗಳಿಂದ ತುಂಬಿರುವುದು ಸ್ಪಷ್ಟವಾಗಿದೆ. ಉದಾಹರಣೆಗೆ, ನಾಯಿಕೆಯ ಮುಖವು ಚಂದಿರನಂತೆ ದುಂಡು ಮತ್ತು ಪ್ರಕಾಶಮಾನ ಹಾಗೂ ನಾಯಕನ ಕಣ್ಣುಗಳು ಕನ್ನೈದಿಲೆಯ ದಳಗಳಂತೆ ಉದ್ದ ಮತ್ತು ವಿಶಾಲ. ಹಾಗೆಯೇ ಚಂದ್ರನ ಉದಯ ಮತ್ತು ನೈದಿಲೆಗಳ ವಿಕಾಸಗಳ ನಡುವಣ ಸಂಬಂಧವೂ ಪುರಾತನ ಕಾವ್ಯ ಪ್ರಸಂಗವೇ. ಅನ್ನಮಾಚಾರ್ಯರ ನೈಪುಣ್ಯವು ಅಡಗಿರುವುದು- ಚಂದ್ರನಂತಹ ನಾಯಿಕೆಯ ಮುಖವು ಶ್ರೀ ವೆಂಕಟೇಶ್ವರನ ನೈದಿಲೆಯಂತಹ ಕಣ್ಣುಗಳನ್ನು ತೆರೆಸುವಂತೆ ಪರಿಣಾಮ ಬೀರಬಲ್ಲದೆನ್ನುವ ಸಮೃದ್ಧ ಸಾಂಗತ್ಯಗಳನ್ನು ಮುಡಿಸಿಕೊಳ್ಳುವುದರಲ್ಲಿ. ಹಾಗೂ ದೇವನಿಗೂ ಸಹಾ ಖಿನ್ನತೆಯ ಕ್ಷಣಗಳಿದ್ದು, ಆತನ ಮನಸ್ಸನ್ನು ಮಸುಕು ಕವಿದುಕೊಂಡಾಗ ಅದನ್ನು ಆತನ ದೈವಿಕ ಸಂಗಾತಿಯ ನೋಟದ ಪ್ರಭೆಯು ಮಾತ್ರವೇ ಹೋಗಲಾಡಿಸಬಲ್ಲುದೆಂಬುದೂ ವ್ಯಕ್ತವಾಗಿದೆ! ಇಲ್ಲಿ ಲೌಕಿಕ ಅನುರಾಗದ ಹೊಳಪು ಅಲ್ಲಲ್ಲಿದ್ದರೂ, ಪ್ರೇಮಜೋಡಿಯ ಮೂಲ ಸೂತ್ರವಾಗಿರುವ ದೈವಿಕತೆಯನ್ನು ಯಾರೊಬ್ಬರೂ ಒಮ್ಮೆಗೇ ಮರೆತುಬಿಡುವಂತಿಲ್ಲ.

ದೈವಿಕ ಕಾವ್ಯದಲ್ಲಿ ಶೃಂಗಾರದ ಧಾಟಿಯನ್ನು ನಿರ್ವಹಿಸುವಲ್ಲಿ ಅನ್ನಮಾಚಾರ್ಯರೇ ತೆಲುಗಿನಲ್ಲಿನ ಮೊದಲ ಗಮನಾರ್ಹ ರಚಕರು. ಅವರ ನಂತರದವರು ಈ ಕಲಾವಂತಿಕೆಯಲ್ಲಿ ಅವರನ್ನು ಅನುಕರಿಸಲು ಸಾಧ್ಯವಾಯಿತೇ ಹೊರತು, ಅವರನ್ನು ಮೀರಿಸಲಾಗಲಿಲ್ಲ. ಅವರ ನಿರ್ಮಿತಿಯು ಎಷ್ಟು ಗಣನೀಯವಾಗಿತ್ತೋ ಅವರ ಹರಹೂ ಅಷ್ಟೇ ವಿಸ್ತಾರವಾಗಿತ್ತು. ತತ್ಪರಿಣಾಮವಾಗಿ, ಮಾನುಷ ಇಲ್ಲವೇ ದೈವಿಕ ಪ್ರೇಮಕ್ಕೆ ಸಂಬಂಧಪಟ್ಟ ಯಾವುದೇ ಭಾವಾನುಕಂಪವೂ, ಅವರ ಒಂದಿಲ್ಲೊಂದು ಗೀತೆಗಳಲ್ಲಿ ಸ್ಮರಣೀಯ ಅಭಿವ್ಯಕ್ತಿಯನ್ನು ಪಡೆಯದೇ ಇರುವುದಿಲ್ಲ. ಅದು ಅನುರಾಗದ ಹಂಬಲಿಕೆಯ ನೋವಾಗಲೀ ಇಲ್ಲವೇ ಸಾರ್ಥಕ್ಯದ ಸಂತೋಷವಾಗಲೀ, ಭಾವ ತೀವ್ರತೆಯನ್ನವರು ವಿಶೇಷವಾದ ಪ್ರಚೋದಕ ಚಿತ್ರಗಳ ಸರಣಿಯ ಮೂಲಕ ಕೌಶಲದಿಂದ ವಿಶದಪಡಿಸುತ್ತಾರೆ. ಅವುಗಳು ಹಲವು ವೇಳೆ, ಶ್ರೇಷ್ಠ ಪ್ರೇಮಕಾವ್ಯಗಳಲ್ಲಿನ ಚಿರಪರಿಚಿತ ಸಾಂಪ್ರದಾಯಿಕ ಪ್ರತಿಮೆಗಳಿಗಿಂತಲೂ ಚೇತೋಹಾರಿಯಾಗಿ, ಭಿನ್ನವಾಗಿರುತ್ತವೆ. ಈ ಲಕ್ಷಣವು, 'ಪಲಪಾಟ'ವೆನ್ನುವ ಜಾನಪದ ಛಂದಸ್ಸನ್ನು ಅಳವಡಿಸಿಕೊಂಡಿರುವ ಅವರ ಜನಪ್ರಿಯ ಗೀತೆಯೊಂದರಲ್ಲಿ ನಿಚ್ಚಳವಾಗಿ ತೋರುತ್ತದೆ. ಹಾಗೂ ಅವರು ನಾಯಿಕೆಯ ಆರಂಭಿಕ ವಿಷಾದ ಹಾಗೂ ಅಂತಿಮ

ತನ್ಮಯಭಾವವನ್ನು ಹಲವಾರು ಪದ್ಯಗಳ ಮೂಲಕ ಉಲ್ಲಾಸದಿಂದ ವರ್ಣಿಸುತ್ತಾರೆ: ಅವುಗಳಲ್ಲಿ ಒಂದೊಂದೂ ಚಿತ್ತಾಕರ್ಷಕ ಚಿತ್ರಣಗಳ ಶ್ರೇಣಿಯಲ್ಲಿ ಚೊಕ್ಕವಾಗಿ ಮೂಡಿಸಿರುವ ಚಿತ್ರವಾಗಿ ರೂಪಿತವಾಗಿದೆ.

ಮೇಲು ಮಾಳಿಗೆಯಿಂದ ನಿನ್ನನೇ ನೋಡುತಲಿರುವೆ
ನಿನ್ನೊಲುಮೆಗಾಗಿಯೇ ಹಂಬಲಿಸುತಿರುವೆ
ನಿಟ್ಟುಸಿರಿನಲೇ ನಾ ದಿನಗಳ ಕಳೆವೆ
ಓ, ವೆಂಕಟೇಶನೇ
ನೀನೆತ್ತ ಹೋಗಿರುವೆ
ಆವತ್ತಿನಿಂದಲೂ?

ಮಲ್ಲಿಗೆಯ ಹಾಸಿನ ಮೇಲೆ ಹೊರಳಾಡುತಲೀ
ನಿದ್ರೆಯಿಲ್ಲದ ರಾತ್ರಿಗಳ ಕಳೆವೆ
ನಿನ್ನನು ಕುರಿತೇ ಹಾಡುತಲಿರುವೆ
ಓ, ವೆಂಕಟೇಶನೇ
ಬೆಳದಿಂಗಳು ತಾನೇ ಬಿಸಿಯಾಗುತಲಿದೆ
ನಡು ಬೇಸಿಗೆಯ ಹಗಲಿನ ತೆರದಿ

ಒಪ್ಪವಾದ ನಿನ್ನುಂಗುರವನು
ಉಬ್ಬಿದ ಎನ್ನೆದೆಗೆ
ಅಪ್ಪಿಕೊಂಡಾಗಲೆಲ್ಲ
ಓ, ವೆಂಕಟೇಶನೇ
ಮೊಹರಿನ ಮೇಣದ ಮೇಲಿನ ಹಾಗೆಯೇ
ಉಳಿಸಿಬಿಡುವುದದು, ಥಳಥಳಿಸುವ ಮುದ್ರೆಯನು

ವಸಂತ ಮಾಸದಲಿ, ಮಾವಿನ ತೋಪಿನಿಂ
ಕೋಕಿಲ ಗಾನವ ನಾ ಕೇಳಿದಾಗೆಲ್ಲ
ನಿನ್ನಯ ಇನಿದನಿಯೆಂದೇ ಭ್ರಮಿಸುವೆ
ಓ, ವೆಂಕಟೇಶನೇ,
ನನ್ನ ಬದಿಗೆ ನೀ ಬಳಿಸಾರೆಂದು
ನಿನ್ನ ನಾ ಕರೆಯುತಲಿರುವೆ

ಕೊಳದಲಿ ಕಮಲಗಳ
ಬಳಿ ಸುಳಿದಾಗಲೆಲ್ಲಾ
ನಿನ್ನ ಕಂಗಳೇ ಅವೆಂದು ತಿಳಿವೆ
ಓ ವೆಂಕಟೇಶನೇ
ಕಾಮದೇವನ

ಬಾಣಗಳಂತೆ ಅವು ಹೊರಳಿದುವಲ್ಲಾ ?

ಒಮ್ಮೆ ನಾವಿಬ್ಬರೂ ಕೂಡಿ-ಆಡಿದ
ಪ್ರೇಮದ ಸವಿ ಸಿಹಿ ನುಡಿಗಳೇ
ಭಿತ್ತಿಯಿಲ್ಲದ ಚಿತ್ರಗಳಾಗಿ ಒಡಮೂಡಿವೆ,
ಓ, ವೆಂಕಟೇಶನೇ,
ಎನ್ನ ಚಿತ್ತ-ಪಟಲದಿ ಅವು
ಚೆನ್ನಾಗಿಯೇ ನಾಟಿ ಬಿಟ್ಟಿವೆ

ಒಲವಿನೋಲೆಯೊಂದನು ಕಳಿಸಿದೆ ನಾನು
ನಿನಗೆ ಪಾರಿವಾಳವೊಂದರ ಬಳಿಯಲಿ
ಓ, ವೆಂಕಟೇಶನೇ
ನಿನ್ನನು ಬೇಗನೇ ಈಗಲೇ
ಇಲ್ಲಿಗೆ ಕರೆತರಲೆಂದು ಕೋರುತ
ಆ ದೇವನ ನಾ ತೀವ್ರವಾಗಿ ಪ್ರಾರ್ಥಿಪೆನೆಂದು

ನಿನ್ನಯ ಮಾತನು ನಂಬುವೆ
ನಾ ಹೃದಯ ತುಂಬಿ
ಎನ್ನ ಮೇಲೆ ನಿನ್ನ ಕೃಪೆಯ ಸುರಿಸು
ಓ, ವೆಂಕಟೇಶನೇ
ಸುತ್ತಲೂ ಮುತ್ತುತಿಹ ಕತ್ತಲೆಯ
ನೀನೊಮ್ಮೆಲೇ ಹರಿಸು

ಕಟ್ಟಕಡೆಗೂ ನೀ
ಎನ್ನ ಕೂಡಿದೆ;
ನಿನ್ನ ಪ್ರೀತಿಯನತಿಯಾಗಿ ಉಣಿಸಿದ
ಓ, ವೆಂಕಟೇಶನೇ
ಖಂಡಿತವಾಗಿಯೂ ಇದು ನನ್ನ
ಅಂತರಾತ್ಮಕೆ ರಸದೌತಣವು

ತನ್ನ ಇನಿಯನ ವಿರಹದಿಂದಾದ ತೀವ್ರ ವೇದನೆಯನ್ನು ಅನುಭವಿಸುವ ನಾಯಿಕೆಯು, ಭಾರತೀಯ ಸಾಹಿತ್ಯದ ಒಂದು ಚಿರಪರಿಚಿತ ಪಾತ್ರ, ಹಾಗೂ ಅವಳ ನೋಟ ಮತ್ತು ನಡೆಗಳ ಸುತ್ತಲೂ ಅನೇಕ ಕಾವ್ಯ ಪರಂಪರೆಗಳು ಬೆಳೆದುಬಂದಿವೆ. ಅವಳು ಬಯಕೆಯ ಬೇಗೆಯಿಂದ ಎಷ್ಟು ಬೇಯುತ್ತಾಳೆಂದರೆ, ಬೆಳದಿಂಗಳು ಹಾಗೂ ತಂಗಾಳಿಯೂ ಸಹಾ ಅವಳನ್ನು ಗಾಯಗೊಳಿಸುವುವು ಮತ್ತು ಅವಳನ್ನು ಹೂಬಾಣಗಳಿಂದ ಬಾಧಿಸುವ ಪ್ರೇಮದೇವನಿಗೆ ಮಾತ್ರ ಅವಳ ಆಯ್ಕೆಯ ಬೈಗುಳೆಲ್ಲವೂ ಮೀಸಲಾಗಿವೆ. ಒಟ್ಟಿನಲ್ಲಿ ಅವಳೊಂದು, ಭಾವಿಯ-ಭೌತಿಕ ಜಂತು ಹಾಗೂ ಅವಳನ್ನು ಹೊಗಳಿಕೆಯ ಹೊಳಪಿನಲ್ಲಿ

ಚಿತ್ರಿಸುವುದು ಅಸಾಧ್ಯವೆಂಬಂತೆ ತೋರುತ್ತದೆ. ಅದಾಗ್ಯೂ ಅನ್ನಮಾಚಾರ್ಯರಂಥ ಸಂತ-ಕವಿಯೊಬ್ಬರು, ನಿಷ್ಠುರ ಧಾರ್ಮಿಕ ಸಂಯಮವನ್ನು ಆಚರಿಸುವವರಲ್ಲಿ ಮಾತ್ರ ಕಾಣಬರುವ ಗುಣ ಲಕ್ಷಣಗಳನ್ನು ಆಕೆಗೆ ಪ್ರದಾನ ಮಾಡುವ ಮೂಲಕ ಆಕೆಯನ್ನು ಮೃಗೀಯ ಮನೋವಿಕಾರಗಳ ಹಂತದಿಂದ, ಆಧ್ಯಾತ್ಮಿಕತೆಯ ಉತ್ತುಂಗಕ್ಕೆ ಏರಿಸಬಲ್ಲರು.

ಇರುವುದೇನು, ಇದಕಿಂತ
ಗುರುತರವಾದ
ವರವು-ಉಗ್ರವ್ರತವು
ಹಿರಿಮೆ-ಕೀರ್ತಿಯು?

ಯೋಗ ಪಾರಂಗತರಂತೆ ಎಲ್ಲ
ತೋರಿಕೆಯ ಬಂಧಗಳನವಳು
ತೊರೆದಿಹಳು,
ಬರಡಾಗಿಹುದವಳ ಬಯಕೆಗಳು,

ಸ್ಥಿರ ಬುದ್ಧಿಯ ನೇರ
ಕುರುಹುಗಳಿಂದಲಿ
ಗುರುತುಗೊಂಡಿಹುದವು-
ತರುಣಿಯ ಜೀವಿತವಿಂತು ಸಾರ್ಥಕವು

ದೇವನೊಡನಿರುವ ತನ್ನ
ಅನಂತ ಅನುಬಂಧದಿಂದ
ಸತತ ಸಂತಸದ
ಸ್ಥಾನವಾಗಿಹುದವಳ ಹೃದಯ,
ಕಮಲ ಕಣ್ಣಿನ ಕನ್ಯೆ
ಮನೋನಿಗ್ರಹದಿಂದಲೇ
ಶಾಂತಿಯ ಸಾಧಿಸಿಹಳು

ಶ್ರೀ ವೆಂಕಟೇಶನ ಕುರಿತ
ನಿರತ ಧ್ಯಾನದಿಂದಲಿ,
ದೈವಿಕ-ಪ್ರಕೃತಿಯ
ಅರಿವನು ಗಳಿಸಿಹಳೋ,
ಪರಮ ದೇವನ ಕರುಣೆಯೊಳು
ತಾನೇ ಆವೃತಗೊಂಡಿಹಳೋ,
ಅವಳ ಮನವನಾವರಿಸಿಹುದು
ಅಂತವಿಲ್ಲದ ನಿಶ್ಚಲತೆಯು

ಈ ವರ್ಣನೆಯಿಂದ, ಅದು ತನ್ನ ಪ್ರೇಮಿಯ ಅಗಲಿಕೆಯ ಸ್ಥಿತಿಯಲ್ಲಿರುವ ನಾಯಕಿಯ ಚಿತ್ರವನ್ನು ಮುಂದಿಡುತ್ತಿದೆ ಎಂಬ ವಸ್ತುಸ್ಥಿತಿಯನ್ನು ಗ್ರಹಿಸುವುದು ಕಷ್ಟಸಾಧ್ಯ: ಏಕೆಂದರೆ, ದುಗುಡದ ಪರಿಚಿತ ಲಕ್ಷಣಗಳಾವುವೂ, ಇಲ್ಲಿಲ್ಲಿಯೂ ನಿರೂಪಿತವಾಗಿಲ್ಲ. ಬದಲಾಗಿ, ಅದು ಭಗವಂತನನ್ನು ಸತತ ಧ್ಯಾನಿಸುವ ಮೂಲಕ ಯಾವುದು ಧರ್ಮನಿಷ್ಠರೆಲ್ಲರ ಅಂತಿಮ ಗುರಿಯಾಗಿರುವುದೋ, ಅಂತಹ 'ಪರಮಾತ್ಮನೊಂದಿಗಿನ ಅಧ್ಯಾತ್ಮಿಕ ಸಂಯೋಗ'ವನ್ನು ಸಾಧಿಸಿಕೊಳ್ಳುವಲ್ಲಿ ಆಕೆಯು ಶಕ್ತಳಾದವಳೆಂದು ಸೂಚಿಸುತ್ತದೆ.

ಆದರೂ, ನಾಯಕಿಯ ಪರಮಾನಂದದ ಸ್ಥಿತಿಯನ್ನು ವಿವರಿಸುವ ತಮ್ಮ ಬೇರೊಂದು ಗೀತೆಯಲ್ಲಿ ಅನ್ನಮಾಚಾರ್ಯರು, ಆಕೆಯು ಭಗವಂತನಿಂದ ಭೌತಿಕ-ಅಗಲಿಕೆಯ ಅವಸ್ಥೆಯನ್ನು ಅನುಭವಿಸುತ್ತಿರುವಳೆಂದು ಸ್ಪಷ್ಟವಾಗಿ ಹೇಳುತ್ತಾರೆ:

ಅಚ್ಚರಿಯೇ ಸರಿ, ಇದು
ಆ ತರುಣಿಯ ಮುಖಭಾವದಲಿ
ತೋರದಿರುವುದು ನಿನ್ನಯ
ವಿರಹದ ಕುರುಹುಗಳು
ನಿನ್ನನವಳು ನೆನೆದಾಗಲೆಲ್ಲ
ಗೋಚರಿಸುವೆ ನೀನೇ ಅವಳ ಭಾವದಲಿ

ಬಟ್ಟ ಬಯಲನೇ ಆಲಂಗಿಸುವಳವಳು
ಅನುಮಾನವಿಲ್ಲ, ತಿಳಿದಿರುವಳು,
ಯಾರ ಮೂಲಕವೋ;
ನೀನಾವರಿಸಿಕೊಂಡಿಹೆ
ಶೂನ್ಯವನು ಕೂಡಾ ಎಂಬುದನು

ನಿನ್ನನವಳು ಹೊಗಳಿ ಹಾಡುವಾಗೆಲ್ಲ,
ನಿನ್ನದೇ ರೂಪವ ಕಾಣುವಳು
ಬಟ್ಟ ಬಯಲನೇ ದಿಟ್ಟಿಸಿ ನೋಡುವಳು
ಕೇಳಿರಲೇ ಬೇಕವಳು,
ಯಾರೊಬ್ಬರಿಂದಲೋ;
ನೀನಿರುತಿರುವೆ
ಎಲ್ಲ ದಿಸೆಗಳಲೂ-ಎಂಬುದನು

ತನ್ನ ಎಲ್ಲ ಮಾತು-ಚಿಂತನೆಗಳಲವಳು
ನಿನ್ನ ಮೇಲೆಯೇ ಸತತ ಗಮನವಿರಿಸಿಹಳು,
ನಿನ್ನ ತೋಳಿನಲವಳ ಸೆಳೆದುಕೊಂಡೀಯೆಂದು
ಓ ವೆಂಕಟಾದ್ರಿಯ ದೊರೆಯೇ,
ಸತ್ಯಪೀಗ ಮನವರಿಕೆಯಾದುದೆಮಗೆ:
ಸರ್ವಾಂತರ್ಯಾಮಿಯು ನೀನೆಂದು

ತನ್ನ ಪ್ರೇಮಿಯ ಅಗಲಿಕೆಯನ್ನು ಅನುಭವಿಸುವ ಯುವತಿಯ ನಡವಳಿಕೆಯನ್ನು ವರ್ಣಿಸುವ ಕಾರಣಕ್ಕಾಗಿ, ಇದನ್ನು ಶೃಂಗಾರ ಗೀತೆಯೆಂದು ವರ್ಗೀಕರಿಸಲಾಗಿದ್ದರೂ, ಅದು ವಾಸ್ತವವಾಗಿ ಅಧ್ಯಾತ್ಮಿಕ ವಿಕಾಸದಲ್ಲಿ ಉನ್ನತ ಹಂತವನ್ನು ತಲುಪಿರುವ ಭಕ್ತನೊಬ್ಬನ ಮಾನಸಿಕ ಸ್ಥಿತಿಯನ್ನೇ ಪ್ರಸ್ತುತಪಡಿಸುತ್ತದೆ. ಹಾಗೂ ಅಂತಹ ಗೀತೆಗಳಲ್ಲಿ ಮಾನವ ಪ್ರೇಮ ಮತ್ತು ಧಾರ್ಮಿಕ ವ್ಯಾಮೋಹದ ನಡುವಣ ಭಿನ್ನತೆಯು ಕಾಣೆಯಾಗುವಂತೆಯೇ, ಶೃಂಗಾರ ಮತ್ತು ದೈವಿಕತೆಯ ಮಧ್ಯದ ತಾರತಮ್ಯವೂ ಮರೆಯಾಗುತ್ತದೆ. ಅನ್ನಮಾಚಾರ್ಯರ ರಚನೆಗಳನ್ನೊಳಗೊಂಡ ತಾಮ್ರಫಲಕಗಳ ಮೇಲಿನ ಶೃಂಗಾರ ಕೀರ್ತನೆಗಳು ಎಂಬ ಗುರುತು ಪಟ್ಟಿಯು, ಜಾನಪದ ರಾಗ ಹಾಗೂ ಛಂದಸ್ಸನ್ನು ಬಳಸಿಕೊಂಡಿರುವ ಹಾಗೂ ಆಳ್ವಾರರ ಪ್ರತಿಷ್ಠಿತ ಪರಂಪರೆಯಲ್ಲಿ ಕೃಷ್ಣನ ಹುಡುಗು ಚೇಷ್ಟೆಗಳನ್ನು ಅಕ್ಕರೆಯಿಂದ ಬಣ್ಣಿಸುವ ಗೀತೆಗಳ ಗುಂಪಿಗೂ ವಿಸ್ತರಿಸುವುದನ್ನು ಕೂಡಾ ಗಮನಿಸಬೇಕು.

ಅವರ ಅಧ್ಯಾತ್ಮಿಕ ಗೀತೆಗಳು ಅರ್ಥಪೂರ್ಣವಾಗಿ ಅತಿ ವಿಸ್ತಾರವಾದ ಹರಹನ್ನು ಹೊಂದಿವೆ: ಹಾಗೂ ಅವು ವಿಷ್ಣು ಭಕ್ತಿಯ ಪ್ರಾಮುಖ್ಯ, ಶರಣಾಗತಿ ತತ್ವದ ಪ್ರಭಾವ, ಪ್ರಾಪಂಚಿಕ ಸಾಧನೆಗಳ ಪೊಳ್ಳುತನ, ನಿಜಭಕ್ತನ ಪಾವನ ಸ್ಥಿತಿ, ಪರಮಾತ್ಮನ ಪಿತೃ ಸ್ಥಾನ ಮತ್ತು ಜಾತಿ-ಧರ್ಮಗಳ ತೋರಿಕೆಯ ಬೇಧವನ್ನು ಮೀರಿಸಬಲ್ಲ ಸಕಲ ಮಾನವ ಜೀವಿಗಳ ಸಹೋದರತ್ವ, ಇಂತಹ ವೈವಿಧ್ಯ ವಿಷಯಗಳ ಕುರಿತು ಪ್ರಸ್ತಾಪಿಸುತ್ತವೆ. ಅಲ್ಲದೆ ದೇವರೊಡನೆ ಕವಿಯ ಸಂಬಂಧದಲ್ಲಿ ಬದಲಾಗುತ್ತಿರುವ ಮುಖಗಳಿಗೆ ಕನ್ನಡಿ ಹಿಡಿಯುತ್ತವೆ. ಅವರು ಶ್ರೀ ವೆಂಕಟೇಶ್ವರನನ್ನು, ಇಡೀ ವಿಶ್ವವನ್ನು ಆವರಿಸಿರುವ ಸರ್ವೋನ್ನತ ಚೈತನ್ಯವನ್ನಾಗಿ ಪರಿಗಣಿಸುವರು, ಆತನನ್ನು ಪ್ರಶಂಸಿಸುವರು, ಆತನಿಗೆ ಪೂಜಾದಿಗಳನ್ನು ಅರ್ಪಿಸುವರು, ಒಮ್ಮೊಮ್ಮೆ ಆತನೊಡನೆ ಕಲಹವಾಡುವರು, ಒಡನೆಯೇ ಆತನ ಕ್ಷಮೆ ಬೇಡುವರು, ಹಾಗೂ ಕೆಲವೊಮ್ಮೆ ಆತನನ್ನು ಹಾಸ್ಯ ಮಾಡಲೂ ಹಿಂಜರಿಯರು-ಹೀಗಿದೆ, ತನ್ನ ದಿವ್ಯ ಧಣಿಯೊಡನೆ, ಅವರು ಕಲ್ಪಿಸಿಕೊಳ್ಳುವ ಸಲಿಗೆಯ ಸ್ವರೂಪ. ಅವರ ಗೀತೆಗಳಲ್ಲಿ ಪರಮಾತ್ಮನ ಬಗ್ಗೆ, ಪಾರವಿಲ್ಲದ ಪ್ರೀತಿಯ ಹಾಗೆಯೇ, ನಿರಪೇಕ್ಷ ಶರಣಾಗತಿಯೂ, ಸ್ವಯಂ ಸಿದ್ಧವಾಗಿದೆ. ಅವುಗಳಲ್ಲಿ ಅವರು ವ್ಯಕ್ತಗೊಳಿಸುವ ಭಾವವು, ಬರಿಯ ಭಕ್ತಿಯಲ್ಲ, ಅದೊಂದು ಮಿತಿಯರಿಯದ ಮಮಕಾರದ ಅನುಬಂಧ. "ಪರಮಾತ್ಮನ ಪರಮ ಪ್ರೀತಿಯ ಸ್ವಭಾವದ ರೀತಿಯದ್ದು" ಎಂದು ಭಕ್ತಿಯ ಬಗೆಗೆ ಮಹರ್ಷಿ ನಾರದರ ಪ್ರಸಿದ್ಧ ಸೂತ್ರವನ್ನು, ಅವರ ಈ ಗೀತೆಗಳನ್ನು ಉದಾಹರಿಸಿ, ಸ್ಪಷ್ಟವಾಗಿ ಅರ್ಥೈಸಿಕೊಳ್ಳಬಹುದಾಗಿದೆ.

ದೈವತ್ವದೆಡೆಗೆ ಮುನ್ನಡೆಸುವ ಮಾರ್ಗಗಳು ಹಲವಾರಿವೆ: ವಿಶಿಷ್ಟಾದ್ವೈತ ಮತದ ಅನುಯಾಯಿಯಾಗಿ ಅನ್ನಮಾಚಾರ್ಯರು 'ಸ್ವಯಂ ಶರಣಾಗತಿ'ಯನ್ನೇ, ಗುರಿ ಸಾಧಿಸಲು ಅತ್ಯಂತ ಸುಲಭ-ಸಾಧನವೆಂದು ಕೊಂಡಾಡುತ್ತಾರೆ. ಒಂದಾದ ಮೇಲೊಂದು ಗೀತೆಗಳಲ್ಲಿ, ಅವರು ಅದರ ಸೌಲಭ್ಯ ಹಾಗೂ ಖಚಿತತೆಯನ್ನು ಒತ್ತಿ ಹೇಳುತ್ತಾರೆ. ಬೇರೆ ಮಾರ್ಗಗಳು ಸಹಾ ಬಯಸಿದ ಗುರಿಯನ್ನು ದೊರಕಿಸಿಕೊಡಬಲ್ಲವಾದರೂ, ತಾವು ಪ್ರತಿಪಾದಿಸುವ

ಪಥದಲ್ಲಿರುವ ಸುಲಭತೆ ಹಾಗೂ ಚೊಕ್ಕತನಗಳು ಅವುಗಳಲ್ಲಿಲ್ಲವೆನ್ನುತ್ತಾರೆ.

ಮರದ ಕಾಂಡ ಎದುರಿಗಿರಲು
ತುದಿಯಲಿರುವ ಎಲೆಗಳಿಗೆ
ನೀರ ಹೊತ್ತು ಎರೆವುದೇತಕೆ?

ನೀನೇ ಎನ್ನ ಎದೆಯೊಳಿರಲು
ಇತರೆ ವಸ್ತು-ವಿಚಾರಗಳ
ಚಿಂತೆಯಾವರೂ ಎನಗೆ ಏತಕೆ?

ಕೆಲರು ತಾವು
ವೇದಗಳ ಹಾದಿಯನ್ನೇ ಹಿಡಿದೇವೆಂಬರು,
ಆದರೆ ವೇದಗಳೇ ದಿಟಕೂ ನಿನ್ನ
ದಿವ್ಯ-ವದನಗಳಲ್ಲವೇ?

ಲೋಕದೆಲ್ಲ ವಿಧಿಗಳಿಗೆ ತಾವು
ಬದ್ಧರಾಗಲೆಳಿಸುವರು ಹಲರು
ಲೋಕಗಳೆಲ್ಲವು ಕೂಡಾ
ನಿನ್ನ ಮಾಯಾ-ಬಲದ ಫಲಗಳಲ್ಲವೇ?

ಹೃದಯದಾಸೆಗಳನು
ಹುದುಗಿಸಲೆಸಗುವರು ಹಲರು,
ಬಯಸಿದಾದಲ್ಲಿ ನೀನು,- ಅವು ಮರಳಿ
ಒದಗಿ ಬಂದಾವೆಂಬುದನು ತಾವು
ಗ್ರಹಿಸದಾವರೇ?

ದೇಹ-ಮನಸುಗಳನು ತಾವು
ಅದುಮಿಡಲು ಹೋರಾಡುವರು,
ಆದರೂ, ಒಡೆಯ
ಅವು ಕೂಡಾ ನಿನ್ನಿಂದಲೇ ಮೂಡಿದುವಲ್ಲವೇ?

ಸುಲಭ ಗುರಿಯು ಸಾಧಿಸಲಿಕೆ
ಅಲ್ಲಿ - ಇಲ್ಲಿ ಅಲೆಯಲೇತಕೆ?
ಸನಿಹದಲೇ ಸರೋವರವಿರಲು,
ಬರಡು ನದಿಯ ಬುಡವ ತಾನು
ನೀರಿಗಾಗಿ ಬಗೆಯಲೇತಕೆ?

ನಾನೇ ನಾನಾಗಿ ಶರಣಾಗಿರುವೆ ನಿನಗೆ
ಕರುಣಾಳು ದೊರೆ, ಶ್ರೀ ವೆಂಕಟೇಶ ದೇವ

ಸಂತೆ-ಮಾಳದಲಿ, ವೇದಾಂತ ವಿಷಯಗಳ
ಚಿಂತೆಯನು ಮಾಡಲೇತಕೆ?

ಕರುಣಾಮಯನಾದ ವಿಷ್ಣುವಿನ ಚರಣಗಳಲ್ಲಿ ತಂತಾನೇ ಶರಣಾಗುವುದು ಜ್ಞಾನಪುರುಷನ ಸುಕೃತ. ಅಂತೆಯೇ ಅದು ಅನ್ನಮಾಚಾರ್ಯರಿಗೆ ಮೆಚ್ಚಿನ ವಿಷಯ. ಅದಕ್ಕಾಗಿಯೇ ಅವರು ಜಗತ್ತಿನ ನೊಂದ ಜೀವಿಗಳಿಗೆ ಭರವಸೆ ಮತ್ತು ಒತ್ತಾಸೆಯ ಸಂದೇಶವನ್ನು ಸಾರುವ ಉತ್ಸುಕತೆಯಲ್ಲಿ, ಆ ವಿಚಾರಕ್ಕೆ ಸಂಬಂಧಿಸಿದಂತೆ ಹಲವಾರು ಗೀತೆಗಳನ್ನು ಬರೆದರು:-

ದೇವನ ತಾ ನಂಬಿದವಗೆ
ವೇದನೆಗೆ ಕಾರಣವೇ ಇಲ್ಲ,
ಸುಖದಾತ ಲಕುಮೀಸಖನೇ
ಸಕಲ ರೀತಿಯಲು ಅವನ ಕಾಯುವನಲ್ಲ?

ಚಿಂತನಾಶೀಲ ಧಣಿಯ ದಾಸನು
ಚಿಂತಿತಗೊಳ್ಳನು ಯಾವುದೇ ರೀತಿಯಲು
ಸಾತ್ವಿಕ ಪುರುಷನ ಸತಿಯು
ಅಸಮ್ಮತಿ ಏನೆಂಬುದನೇ ತಾನರಿಯಳು

ಪಿತನು ತಾ ಜಾಗೃತನಿರಲು
ಸುತನಿಗೆ ಚಿಂತೆಯೇ ಇಲ್ಲ,
ಇಳೆಯು ಹೇರಳ ಬೆಳೆ ಬೆಳೆದರೆ
ಬರವೆಂಬುದೇ ತಾನಿಲ್ಲ

ಶಕ್ತರಾಜನು ಅಂಜನು ತಾನು
ಶತ್ರುಜನಗಳ ಧಾಳಿಗೆ,
ಐಸಿರಿಯ ವರ ಪಡೆದವಗೆ
ಇರವು ಯಾವುದೇ ಬೇಡಿಕೆಗಳು

ಪಾಪದ ಸೋಂಕನೇ
ಅರಿಯನು ಸುಕೃತ ಜೀವಿಯು,
ಯಾವುದೇ ಕೇಡು ಕಾಡದು
ಪರಿಶುದ್ಧ ಹೃದಯಿಯನು

ಪರಮಾರ್ಥ ಗುರು ಇರುವವಗೆ
ಕೊರತೆಗಳಾವುವೂ ಇರವು,
ನಾಕದ ಭರವಸೆ ಇರುವವಗೆ
ಲೋಕದ ಭ್ರಮೆಯು ಕಾಡಿಸದು

ಶ್ರೀ ವೆಂಕಟೇಶನೇ ನಮ್ಮೊಡನಿರುವನು
ಖಾತರಿಗೊಳಿಸಲು ನಮ್ಮೊಳಿತನು
ನಾವು, ಅವನ ದಾಸರು
ಆತಂಕವನೇ ಅರಿಯದವರು

ಅನ್ನಮಾಚಾರ್ಯರ ಕಲ್ಪನೆಯು, ಈ ಐಹಿಕ ಜಗತ್ತಿನಲ್ಲಿ ದೈವಿಕ ಚೇತನವನ್ನು ಅನೇಕ ಪರಿಚಯ ರೂಪಗಳಲ್ಲಿ ಪ್ರಸಿದ್ಧಪಡಿಸುವ ಹಾಗೂ ದೈನಂದಿನ ಚಟುವಟಿಕೆಗಳನ್ನು ಧಾರ್ಮಿಕ ಅರ್ಥದ ಸಿರಿಯಿಂದ ಸಂಪನ್ನಗೊಳಿಸುವ, ಸ್ಪಂದನ ಶಕ್ತಿಯನ್ನು ಹೊಂದಿದೆ. ಉದಾಹರಣೆಗಾಗಿ, ತಮ್ಮ ಗೀತೆಗಳಲ್ಲೊಂದರಲ್ಲಿ ಅವರು ಶ್ರೀ ವೆಂಕಟೇಶ್ವರನನ್ನು ಹಳ್ಳಿಗಾಡಿನ ಸಾಮಾನ್ಯ ದೃಶ್ಯವಾದ ಕೈಮಗ್ಗದ ಸೀರೆಗಳ [27] ನೇಕಾರ ಹಾಗೂ ಮಾರಾಟಗಾರನನ್ನಾಗಿ ಚಿತ್ರಿಸುವರು. ಆದರೆ ಆ ದೈವಿಕ ಕುಶಲಿಯ ವಸ್ತ್ರ ತಯಾರಿಕೆಯ ವಿಧಾನವು ಅಸಾಧಾರಣವಾಗಿರುವಂತೆಯೇ, ಆತನು ಆ ಸಲುವಾಗಿ ಬಳಸುವ ವಸ್ತುಗಳೂ, ಅಸಾಮಾನ್ಯವಾದವು.

ಈ ಸಂದರ್ಭದಲ್ಲಿ ಗಮನಿಸಬಹುದಾದುದೆಂದರೆ, ಅನ್ನಮಾಚಾರ್ಯರ ಹುಟ್ಟಿದೂರು ತಾಳ್ಳಪಾಕವನ್ನು ಸುತ್ತುವರಿದ ಪ್ರದೇಶವು ಕಾಲಾನುಕಾಲದಿಂದ, ಹತ್ತಿ-ವಸ್ತುಗಳ ನಿಷ್ಣಾತ ನೇಕಾರರಿಗಾಗಿ ಸುಪರಿಚಿತವಾಗಿತ್ತು. ಅವರು ಶ್ರೀ ವೆಂಕಟೇಶ್ವರನ ದೈವಿಕ ಸಂಗಾತಿಯಾದ ಅಲಮೇಲು ಮಂಗಾಯಿಯು ತಮ್ಮ ಕುಲದಲ್ಲೇ ಹುಟ್ಟಿದ ಹುಡುಗಿಯಾದ್ದರಿಂದ ತಮ್ಮ ಸಹೋದರಿಯೆಂದೂ, ಹಾಗಾದ್ದರಿಂದ ಭಗವಂತನೊಡನೆ ತಮ್ಮ ನೆಂಟಸ್ತಿಕೆಯನ್ನೂ ಸಾಧಿಸುವರು. ಇನ್ನೂ ಹೆಚ್ಚಾಗಿ, ಪೆದ್ದ ತಿರುಮಲಾಚಾರ್ಯರ ಕಾಲಕ್ಕೂ ಹಿಂದಿನ ದಾಖಲೆಗಳ ಪ್ರಕಾರ, ತಾಳ್ಳಪಾಕ ವಂಶದ ಸದಸ್ಯರೇ ಅವರ ಆಧ್ಯಾತ್ಮ ಗುರುಗಳಾಗಿದ್ದು ಕಾಲಕಾಲಕ್ಕೆ ಅವರಿಂದ ಧಾರಾಳ ಕೊಡುಗೆ, ಸನ್ಮಾನಗಳನ್ನೂ ಪಡೆದವರಾಗಿದ್ದರು.

ಕಿರುದಾರಿಗಳೆಲ್ಲೆಲ್ಲೂ ಕಾಣುವನು
ಸೀರೆಗಳ ನೇಕಾರನು
ನೆರಳಿನಲಿ ಸುತ್ತಾಡುವವನು
ಮಾರಲಿಕೆ ತನ್ನೆಲ್ಲ ಉಡುಪುಗಳನು

ಹಲವು ರಂಗುಗಳ ಹತ್ತಿಯ
ನೂಲುಗಳಂತಹ
ಮೂಲಧಾತುಗಳೈದನು ತಾನಾರಿಸಿ
ಮೆಲುಚಲನೆಯಿಂದ ತಟ್ಟಿರಿಸಿ,
ಎಳೆಗಳನು ಹುರಿಗೊಳಿಸಿ
ಹಗುರ ಸಿಂಬಿಗಳಿಗೆ ಮೋಹವನೇ ಸುತ್ತಿ,
ಮಾದರಿಗೊಳಿಸುವನವನು
ಮಾರಲಿಕೆಂದು, ನವಿರು ಸೀರೆಗಳನು

ಮೃಗಜಲದ ಹೊನ್ನೀರ ಹನಿಗಳನು
ತನ್ನಾಕೆಯು ಚಿಮುಕಿಸುತಿರಲು
ತಾನೇ ಕಟ್ಟುವ ಕುಟಿಲ ಕೃತಿಗಳ ಅಂಚನು
ನೇಗಿಲಗೆರೆಗಳಂಥ ನೆರಿಗೆಗಳುಳ್ಳ
ಸೀರೆಗಳನವನು ವಿನ್ಯಾಸಗೊಳಿಸಿಹನು

ಜನ ನೆರೆದ ಜಾತ್ರೆಯಲಿ
ಜಗದ ಜೀವಿತದ
ಜವಳಿಯನು ಬಿಕರಿಗಿಟ್ಟಿಹನು
ಅವರವರ ಪೂರ್ವಕರ್ಮಾನುಸಾರ
ದರಗಳನು ನಿಗದಿ ಮಾಡಿಹನು

ದಿರಿಸುಗಳ ತಾನೇ ತಯಾರಿಸಿ
ಮಾರುವನು ತನ್ನ ಮನಸಾರೆ,
ಕೈಮಗ್ಗದ ವಸ್ತ್ರಗಳನು
ಮಾರುವ ಈ ಸನ್ಮಿತ್ರನು,
ತಾನೇ ಪ್ರಬಲನಾದ ಪ್ರಭುವು
ಶ್ರೀ ವೆಂಕಟೇಶ್ವರನು

ಪರಮಾತ್ಮನು ಜಗತ್ತಿನ ಮಾರುಕಟ್ಟೆಯಲ್ಲಿ ವಿವಿಧ ಬಗೆಯ ಬಟ್ಟೆಗಳನ್ನು ಮಾರುವವನು ಹಾಗೂ ಆತನು ಸೃಷ್ಟಿಸಿದ ಜನರೇ, ಅವನ ಗಿರಾಕಿಗಳು. ಲೌಕಿಕ ಆನಂದ-ಅನುಭವಗಳೇ ಬಿಕರಿಗಿರುವ ಸರಕುಗಳು. ವ್ಯಕ್ತಿಯೊಬ್ಬನಿಗೆ ದೊರಕುವ ವಸ್ತ್ರದ ಬಗೆ ಮತ್ತು ಅವನು ತೆರಬೇಕಾದ ಬೆಲೆ, ಎರಡೂ ಅವನ ಪೂರ್ವಕರ್ಮಗಳ ಮೇಲೆಯೇ ಪೂರ್ಣವಾಗಿ ಅವಲಂಬಿತವಾಗಿದೆ. ಇನ್ನೂ ಮಿಗಿಲಾಗಿ, ಇಡೀ ವ್ಯವಹಾರವು ಜರುಗುವುದು ದೈವೀವ್ಯಾಪಾರಿಯ ಮರ್ಜಿ ಮತ್ತು ಖುಷಿಗೆ ಅನುಸಾರವಾಗಿಯೇ. ಹೀಗೆ ಕವಿಯ ಕಲ್ಪನೆಯು ಸರಳ ನೇಕಾರನನ್ನು ವ್ಯಕ್ತಿಯೊಬ್ಬನ ಪೂರ್ವಕರ್ಮಗಳಿಗೆ ಫಲನೀಡುವ ದಿವ್ಯದಾತಾರನನ್ನಾಗಿ ಪರಿವರ್ತಿಸಿದೆ; ಹಾಗೂ ಮಾನವ ಜೀವಿತದ ಹಲವು ಮುಖಗಳನ್ನು ಪ್ರಕಾಶಗೊಳಿಸುವ ರೂಪವನ್ನು ತಾಳಿದೆ.

ಲೋಕದ ಜೀವರಿಗೆ ಪೂರ್ವಕರ್ಮಫಲಗಳನ್ನು ವಿತರಿಸುವಾಗ ಭಗವಂತನು ಬಹಳ ನಿಷ್ಠುರನೂ, ಪಕ್ಕಾ ವ್ಯವಹಾರಸ್ಥನೂ ಆಗಿದ್ದರೂ, ಭಕ್ತರೊಂದಿಗೆ ಅವನ ಬಾಂಧವ್ಯವು ಬೇರೆಯೇ ಆದ ವಿಷಯ. ಅನ್ನಮಾಚಾರ್ಯರು ಅವನೊಂದಿಗೆ ಸಲಿಗೆಯ ಸ್ವರವನ್ನು ಕಲ್ಪಿಸಿದ್ದರೂ ಅಂತಹ ವ್ಯವಹಾರಗಳಲ್ಲಿ ಯಾವಾಗಲೂ ಭಕ್ತನೇ ಮೇಲುಗೈ ಹೊಂದಿರುವನೆಂದು ಹುಡುಗಾಟಿಕೆಯಿಂದ ಸಾಧಿಸುತ್ತಾರೆ.

ತಿಳಿಯೆಯೋ, ನೀನು ಆ ಕಲೆಯ
ತೆಗೆಯುವೆವೋ, ನಾವು ಧಾರಾಳ ಬೆಳೆಯ

ನಿನ್ನಿಂದಲೇ, ಓ ದೇವ,
ನಿಜವಾಗಲೂ-ನಿನ್ನ ಭಕುತರು
ನಿನಗಿಂತಲೂ, ಅತಿ ಬುದ್ಧಿವಂತರು

ಭಕ್ತಿಯಿಂದಲೇ ನಿನ್ನ ಹಿಡಿದಿಟ್ಟು
ಭದ್ರವಾಗಿ ಹೃದಯದಲಡಗಿಸಿಟ್ಟು,
ಬುಟ್ಟಿ ತುಂಬಾ ತುಳಸಿ[28] ತಂದು
ನಿನ್ನ ಅಡಿಗಳಿಗಿಟ್ಟು,
ಬಿಡುಗಡೆಯೆಂಬ ವರವ ಪಡೆವೆವೋ
ಓ ದೇವ, ನಿನ್ನಿಂದಲೇ.
ಖಂಡಿತವೋ, ಇದು
ಪಂಡಿತರೋ, ನಿನ್ನ ಭಟರು
ಅತಿ ಲಾಭ ಪಡೆವಂಥ ದಂಧೆಯಲಿ

ನೀನೇ ನಿರ್ಮಿಸಿದ ಕೃತಿಗಳನು
ನಿನಗೇ ತಂದಿರಿಸಿ,
ನಿನ್ನ ಉದಾರ ದಯೆಯು
ನಾವು ಹೊಂದಬಲ್ಲೆವೋ
ಬರಿಯ ನಮನವೊಂದರಿಂದ ನಮ್ಮ
ಹೊರೆಯುನಿಳಿಸಿಕೊಂಡು
ಹೊರಿಸಿಬಿಡುವೆವೋ ಅದನು ನಿನ್ನ ಮೇಲೆ
ಓ ದೇವ, ನಿನ್ನಯ ದಾಸರು ತಾವು
ಹೆಸರಾದರೋ, ಜಾಣತನಕೆ

ಕೊಡಗಳಲಿ ಕೊಳಗಳ[29] ನೀರ ತಂದು
ಒಡಿಯ ತುಂಬಾ ನಿನಗೆ ಎರೆದು,
ಪಡೆದೆವೋ ಬೇಡಿದೆಲ್ಲ ವರಗಳನ್ನು
ಪ್ರಚಂಡರೋ, ನಿನ್ನ ಶರಣರಂಥಾ ಕ್ರೀಡೆಗಳಲಿ,
ಶ್ರೀ ವೆಂಕಟೇಶನೇ
ನಿನ್ನ ಭಕುತರು, ಖಚಿತವಾಗಿ
ಬಲು ಚತುರರು.

ವಿಶಿಷ್ಟಾದ್ವೈತ ಪಂಥದ ಪ್ರಕಾರ, ಸುಲಭ-ಲಭ್ಯತೆಯು ವಿಷ್ಣುವಿನ ಪ್ರಧಾನ ಗುಣಗಳಲ್ಲೊಂದು. ಅದರ ಪ್ರಮುಖ ಪ್ರತಿಪಾದಕರಾದ ರಾಮಾನುಜರು, ಆತನನ್ನು ತನ್ನಲ್ಲಿ ಆಸರೆಯನ್ನು ಕೋರಿ ಬರುವವರ ಪಾಲಿನ ಮಾತೃವಾತ್ಸಲ್ಯದ ಸತ್ಯಸಾಗರವೆಂದು (ಆಶ್ರಿತ-ವಾತ್ಸಲ್ಯೈಕ-ಮಹೋದಧಿ)[30] ಸಂಬೋಧಿಸುವರು. ಈ ಪ್ರಶಂಸನೀಯ ಗುಣವನ್ನು, ಅನ್ನಮಾಚಾರ್ಯರು ತೋರಿಕೆಯ ದೌರ್ಬಲ್ಯವೆಂದು

ಸರಳ ಪೂಜಾಚರಣೆಗಳಿಂದಲೇ ಸಂತೃಪ್ತಗೊಳಿಸಬಹುದೆಂಬ ಸಂಗತಿಯ ಸಂಪೂರ್ಣ ಪ್ರಯೋಜನವನ್ನು ಅವನ ಆರಾಧಕರು ಪಡೆದುಕೊಳ್ಳುವರೆಂದೂ ಸಲಿಗೆಯಿಂದ ಸೂಚಿಸುವರು. ಯಾವುದು ಪರಮಾತ್ಮನ ಚಾತುರ್ಯದ ನಿರ್ದಿಷ್ಟ ಲೋಪದ ಪ್ರದರ್ಶನವೆಂದು ತೋರಿಬರುವುದೋ, ಅದು ವಾಸ್ತವವಾಗಿ ಭಕ್ತರ ಕಲ್ಯಾಣದ ಬಗ್ಗೆ ಆತನಿಗಿರುವ ದಯಾಪೂರ್ಣ ಕಾಳಜಿಗಾಗಿ ಸಲ್ಲಿಸುವ ಸೊಗಸಾದ ಅಭಿನಂದನೆಯಾಗಿ ಪರಿವರ್ತಿತಗೊಳ್ಳುತ್ತದೆ. ಹಾಗಾಗಿ ಈ ಗೀತೆಯು ದೋಷ ಹುಡುಕುವ ಸೋಗಿನಲ್ಲಿ-ಹೊಗಳಿಕೆಯನ್ನು ನೀಡುವಾಗಿನ ಸಂದರ್ಭದಲ್ಲಿ ಒದಗುವ 'ವ್ಯಾಜ-ಸ್ತುತಿ' ಎಂದು ಭಾರತೀಯ ಕಾವ್ಯಮೀಮಾಂಸೆಯಲ್ಲಿ ಪ್ರಸ್ತಾಪಿತವಾದ ಕಾವ್ಯಾಲಂಕಾರಕ್ಕೆ ಒಳ್ಳೆಯ ಉದಾಹರಣೆಯಾಗಿದೆ.

ಸುಮಾರು ಅದೇ ಪಾಟಿಯ ಬೇರೊಂದು ಅಸಾಧಾರಣ ಗೀತೆಯಲ್ಲಿ ಅನ್ನಮಾಚಾರ್ಯರು, ಭಗವಂತನನ್ನು ತೋರಿಕೆಯ ಟೀಕೆಗಳ ಮೂಲಕ ಹೊಗಳಿ ಹಾಡಲು 'ಕರ್ಮಸಿದ್ಧಾಂತ'ದ ಚೌಕಟ್ಟನ್ನು ಬಳಸಿಕೊಂಡಿದ್ದಾರೆ. ಹಿಂದೂ ಧರ್ಮದ ತಳಹದಿಯಾದ, ಚಿರಪರಿಚಿತ ಕಾರಣ ಮತ್ತು ಕಾರ್ಯ ನೀತಿಯ ಪ್ರಕಾರ, ಮಾನವನೊಬ್ಬನಿಗೆ ಈ ಜನ್ಮದಲ್ಲಿ ಏನೇನು ಸಂಭವಿಸುವುದೋ ಅದೆಲ್ಲಾ ಅವನ ಪೂರ್ವಕರ್ಮದ ಫಲವಾಗಿರುವುದು ಮತ್ತು ಅವನ ಆತ್ಮವು ಪುನರ್ಜನ್ಮವನ್ನು ಹೊಂದಿದಂತೆಲ್ಲಾ, ಸತ್ಕಾರ್ಯಗಳು ಸಂತೋಷವನ್ನೂ, ಪಾಪಕೃತ್ಯಗಳು ದುಃಖ ನೋವುಗಳನ್ನೂ ನೀಡುವುದು-ಹೀಗೆ ವ್ಯಕ್ತಿಯ ಪೂರ್ವಕೃತ್ಯಗಳೇ ಅವನ ಇಂದಿನ ಮತ್ತು ಮುಂದಿನ ಅನುಭವಗಳನ್ನು ನಿರ್ಣಯಿಸುತ್ತವೆ ಎಂದು ಅದು ಸಾರುತ್ತದೆ. ಒಬ್ಬಾತನು ಪೂರ್ವಕಾರ್ಯ ಪರಿಣಾಮವನ್ನು ಎದುರಿಸಲೇಬೇಕಾದ ಅನಿವಾರ್ಯತೆಯಲ್ಲಿನ ನಂಬುಗೆಯನ್ನು ಬಳಸಿಕೊಂಡು, ಶ್ರೀ ವೆಂಕಟೇಶ್ವರನ ದಿವ್ಯ ತೇಜಸ್ಸನ್ನು ಕೊಂಡಾಡುವ ಸಲುವಾಗಿ ಅದನ್ನು ಆತನಿಗೇ ಅನ್ವಯಿಸುತ್ತಾರೆ. ಯಾರ ಇಚ್ಛೆಗನುಸಾರವಾಗಿ ಎಲ್ಲ ಲೋಕಗಳೂ ಮತ್ತು ಅಲ್ಲಿ ಜೀವಿಸುವ ಎಲ್ಲರೂ ಅಸ್ತಿತ್ವಕ್ಕೆ ಬಂದರೋ, ಆ ಭಗವಂತನು ಈ ಕರ್ಮ ಸಿದ್ಧಾಂತದ ವ್ಯಾಪ್ತಿಯಿಂದಾಚೆಗಿದ್ದರೂ ಹಾಗೂ ಅದನ್ನು ಅನ್ನಮಾಚಾರ್ಯರು ಚೆನ್ನಾಗಿ ಅರಿತಿದ್ದರೂ, ಆತನ ತೇಜಸ್ಸಿನ ಲಕ್ಷಣಗಳನ್ನೇ, ದೋಷಗಳೆಂಬಂತೆ ತಿರುಗಿಸಿ ನಗೆಚಾಟಿಕೆಯ ಸ್ನೇಹ ಮನೋಭಾವದಲ್ಲಿ ಅವರು ತಮ್ಮ ದೈವಿಕ ಗುರುವನ್ನು ವಿನೋದ ಮಾಡುತ್ತಾರೆ.

ಯಾರು ಪಾರಾಗುವರೋ ತಮ್ಮ
ಪೂರ್ವಕರ್ಮದ ಫಲಗಳಿಂದ?
ನೀನು ಕೂಡಾ ಅನುಭವಿಸಬೇಕಯ್ಯ-
ನಿನ್ನ ಪಾಪ-ಕಾರ್ಯಗಳಿಗೆ
ದೇವನೇ ನೀನಾದರೂ.

ಜಗದ ಜೀವರನೆಲ್ಲ
ಜಟಿಲ ಸಂಸಾರ ಬಂಧದಲ್ಲಿ
ಜತೆಗೂಡಿಸಿದ ಪಾತಕಕ್ಕೆ,

ಸತಿಯನೆದೆಯ ಮೇಲೆಯೇ
ಹೊತ್ತು ತಿರುಗುವಂತಾಯಿತಲ್ಲೋ,
ದೇವನೇ ನೀನಾದರೂ?

ಜೀವನ-ಜಲಧಿಯಲ್ಲಿ ಜೀವರೆಲ್ಲರನು
ಕಾರಣವೇ ಇಲ್ಲದಲೆ
ಮುಳುಗೇಳುವಂತೆ ಮಾಡಿದುದಕೆ
ಸಾಗರದ ಅಲೆಗಳ ಮೇಲೆ ನೀನೇ
ಮಲಗುವಂತಾಯಿತಲ್ಲೋ
ದೇವರ ಸಾಲಿನಲ್ಲಿ ನೀನು
ಮೊದಲಿಗನಾದರೂ?

ಹೊಟ್ಟೆಪಾಡಿಗಾಗಿ ನಾವು
ಬೆಟ್ಟ ತೊರೆಗಳಿಗೆ-
ಬಿಡುವೇ ಇಲ್ಲದ್ಹಾಂಗೆ
ಅಡ್ಡಾಡುವಂತೆ ಮಾಡಿದುದಕೆ
ನೀನು ಕೂಡಾ,
ಗುಡ್ಡಗಳ ನಡುವೆ ಗೊಣಗಾಡದೆಯೆ
ಬಿಡಾರ ಹೂಡುವಂತಾಯಿತಲ್ಲೋ-
'ಕೊಳಗಳ ದೊರೆ'[31] ಎಂಬ ಬಿರುದ ಪಡೆದು.

ಶ್ರೀ ವೆಂಕಟೇಶ್ವರನು 'ಶ್ರೀನಿವಾಸ'ನೆಂದೂ ಜನಪ್ರಿಯ ಹೆಸರು ಹೊಂದಿರುವನು. ಕಾರಣವೆಂದರೆ ಆತನ ದೈವಿಕ ಸಖಿಯೂ, ಸಂಪತ್ತು ಮತ್ತು ಶುಭದ ದೇವತೆಯೂ ಆದ ಲಕ್ಷ್ಮಿಯು ಅವನ ಹೃದಯದಲ್ಲಿಯೇ ಆಸೀನಳಾಗಿ ಸದಾ ಅವನೊಂದಿಗೇ ನೆಲಸಿ ತನ್ಮೂಲಕ ಆತನ ಶೋಭೆಯನ್ನು ಹೆಚ್ಚಿಸಿದ್ದಾಳೆ. ಆತನು ಕ್ಷೀರಸಾಗರದಲ್ಲಿ ಶೇಷಸರ್ಪನ ಮೇಲೆ ಒರಗಿರುವುದೂ ಸಹಾ ಆತನ ಪರಮಾನಂದದ ಸ್ಥಿತಿಯ ದ್ಯೋತಕವಾಗಿದ್ದು ಆತನ ದಿವ್ಯತೇಜೋರೂಪವಾಗಿದೆ. ಹಾಗೆಯೇ ತಾನು ಮೂರ್ತರೂಪದಲ್ಲಿ ಭುವಿಯ ಮೇಲೆ ನೆಲೆಸಲು ವೆಂಕಟಾದ್ರಿಯನ್ನೇ ಆರಿಸಿಕೊಂಡಿರುವುದು, ಆತನ ಒಲುಮೆ ಮತ್ತು ಹಿರಿಮೆ; ಅಂತೆಯೇ ತನ್ನ ಪಾದಗಳಲ್ಲಿ ಆಸರೆಯನ್ನು ಬಯಸುವವರ ಬಗ್ಗೆ ಆತನಿಗಿರುವ ಅನಂತ ಅನುಕಂಪ, ಇವುಗಳ ಲಕ್ಷಣವಾಗಿದೆ. ಆತನ ಸನ್ನಿಧಿಯ ನೆರೆಯಲ್ಲಿಯೇ ನೆಲೆಗೊಂಡಿರುವ ಬೆಟ್ಟ ಹಾಗೂ ಕೊಳಗಳು ತಮ್ಮ ಅಂತರ್ಗತ ಪಾವಿತ್ರ್ಯದ ಕಾರಣದಿಂದಾಗಿ ಅತಿ ಪುರಾತನ ಕಾಲದಿಂದಲೂ, ಅನ್ನಮಾಚಾರ್ಯರೂ ಸೇರಿದಂತೆ, ಅಸಂಖ್ಯ ಕವಿಗಳಿಂದ ಅಲಂಕಾರಿಕ ಭಾಷೆಯಲ್ಲಿ ಹೊಗಳಿಸಿಕೊಂಡಿವೆ. ಗೀತೆಯ ಸೊಬಗು ಅಡಗಿರುವುದು ಕವಿಯ ಉದ್ದೇಶಪೂರ್ವಕ ವಿನೋದದಲ್ಲಿ ಮತ್ತು ಭಗವಂತನ ದೈವಿಕ ಗಾಂಭೀರ್ಯದ ನಿಜ ಸಂಕೇತಗಳನ್ನು ಆತನ ಪೂರ್ವಕರ್ಮಜನ್ಯವಾದ ಸಂಕಟಗಳೆಂಬಂತೆ, ಬೇಕೆಂದೇ ತಿರುಚಿ ಪ್ರಸ್ತುತಪಡಿಸಿರುವುದರಲ್ಲಿ. ತನ್ನ ದೈವಿಕ ಒಡೆಯನೊಂದಿಗೆ ವ್ಯವಹರಿಸುವಾಗ ಅವರು

ಅನುಭವಿಸುವ ಸ್ವಾತಂತ್ರ್ಯದ ವ್ಯಾಪ್ತಿಯೂ ಅಲ್ಲಿ ಸ್ಪಷ್ಟವಾಗಿ ಸಿದ್ಧವಾಗಿದೆ.

ತಮ್ಮ ಗೀತೆಗಳೊಂದರಲ್ಲಿ ಅನ್ನಮಾಚಾರ್ಯರು, ಹಲವಾರು ಮಂದಿ ವೇದಗಳನ್ನು ಓದಿದ್ದರೂ ಕೆಲವರು ಮಾತ್ರವೇ ಹರಿಯನ್ನು ಗುರುತಿಸುವರೆಂದೂ, ಕೇವಲ ಶಾಸ್ತ್ರಗಳ ಅಧ್ಯಯನವಷ್ಟೇ ಮಾನವರಿಗೆ ಶಾಂತಿಯನ್ನು ತರಲಾರದೆಂದೂ ಹೇಳುತ್ತಾರೆ. ಭಗವಂತನ ಸ್ತುತಿ-ಗಾಯನವಾದ 'ಸಂಕೀರ್ತನೆ'ಯು ಕಲಿಯುಗದಲ್ಲಿ ಒದಗಿಬಂದಿರುವುದು ಅಂತಹ ಜನರಿಗೆ ಮುಕ್ತಿಯನ್ನು ಸುಲಭಗೊಳಿಸಲೆಂದೇ ಎಂದೂ ಹೇಳುತ್ತಾ, ಈ ಸ್ತುತಿಗಳೇ ಪಂಚಮವೇದವೆಂದೂ ವೆಂಕಟೇಶ್ವರ-ವೇದವೆಂದೂ ಘೋಷಿಸುತ್ತಾರೆ. ಆಳ್ವಾರರ ತಮಿಳು ಸ್ತೋತ್ರಗಳ ಮಾಲಿಕೆಯಾದ 'ದಿವ್ಯ ಪ್ರಬಂಧ'ವನ್ನು, ಶ್ರೀ ವೈಷ್ಣವರು ಪಂಚಮವೇದವೆಂದೂ, ದ್ರಾವಿಡವೇದವೆಂದೂ ಪರಿಗಣಿಸುವರು. ಆದ್ದರಿಂದ ಅನ್ನಮಾಚಾರ್ಯರು ಭಗವಂತನ ಸ್ತುತಿಗಳನ್ನು 'ವೆಂಕಟೇಶ್ವರನ ವೇದ'ವೆಂಬುದಾಗಿ ಬಣ್ಣಿಸುವುದನ್ನು ಈ ಹಿನ್ನೆಲೆಯಲ್ಲಿ ಗುರುತಿಸಬೇಕು ಹಾಗೂ ಅದು ದೈವಸ್ತುತಿಗಳ ರಚನೆಯಲ್ಲಿನ ಧಾರ್ಮಿಕ ಶ್ರದ್ಧೆಯ ಶುದ್ಧ ಸಂಕೇತವಾಗಿದೆ.

ಅನ್ನಮಾಚಾರ್ಯರು ತಮ್ಮ ಜೀವಿತದ ಎಳೆವೆಯಲ್ಲಿಯೇ, ಬದುಕಿನ ಅರ್ಥ ಉದ್ದೇಶಗಳನ್ನು ಸ್ಪಷ್ಟವಾಗಿ ಗ್ರಹಿಸಿಕೊಂಡು, ಸಂಪೂರ್ಣ ಸಮರ್ಪಣಾ ಭಾವದಿಂದಲೂ ಹಾಗೂ ವಿಶಾಲ ಜಗತ್ತಿನ ವೈಭವ- ವಿಜೃಂಭಣೆ, ಅಬ್ಬರ-ಆಡಂಬರಗಳಿಂದ ವಿಚಲಿತಗೊಳ್ಳದೆಯೂ ತಮ್ಮ ಗುರಿಯತ್ತ ಸಾಗಿದ ಧನ್ಯಾತ್ಮರಲ್ಲಿ ಒಬ್ಬರಾಗಿದ್ದರು. ಅವರು ಜಗತ್ತಿನೊಂದಿಗೇ ಜೀವಿಸಿದ್ದರು ಹಾಗೂ ತುಂಬುಬಾಳನ್ನೂ ನಡೆಸಿದರು: ಅದರೊಡನಿರುವ ಸಿಹಿ-ಕಹಿಗಳೆರಡನ್ನೂ ಸವಿದರು. ಆದರೆ ಅದೊಂದು ಸಾಗಿ ಹೋಗುವ ರಂಗದೃಶ್ಯವೆಂಬ ಸತ್ಯವನ್ನು ಮಾತ್ರ ಒಂದು ಗಳಿಗೆಯೂ, ಮರೆಯದಾದರು. ತಮ್ಮ ಗೀತೆಯೊಂದರಲ್ಲಿ ಅವರು ಜಗತ್ತಿನ ಆಕರ್ಷಣೆಗಳನ್ನು, ಮಾರುಕಟ್ಟೆಯ ಮೆರುಗು-ಬೆರಗಿಗೂ, ಇರುಳಿನ ವೇಳೆಯ ಮಂಜಿನ ಹನಿಗಳಿಗೂ ಹೋಲಿಸಿದ್ದಾರೆ. ಮಾನವನು ತನ್ನ ಅಸಹಾಯಕ-ಅನಿವಾರ್ಯ ಸ್ಥಿತಿಯಿಂದ ಪಾರಾಗಲು ವಿಷ್ಣುವಿಗೆ ಸಂಪೂರ್ಣವಾಗಿ ಹಾಗೂ ಯಾವುದೇ ನಿರ್ಬಂಧವಿಲ್ಲದೆ ಶರಣು ಹೋಗುವುದೇ ಸುಲಭ ಮತ್ತು ಸುರಕ್ಷಿತ ವಿಧಾನವೆಂದು ಅವರು ಮನಗಂಡಿದ್ದರು. ತಮ್ಮ ಸಹಜೀವಿಗಳ ಶೋಚನೀಯ ಸ್ಥಿತಿಯ ಬಗ್ಗೆ ಅನುಕಂಪಪೂರ್ವಕವಾಗಿ ಸ್ಪಂದಿಸಿದರು; ಹಾಗೂ ತಮಗೆ ದೊರೆತ ಅನುಗ್ರಹವನ್ನು ಅವರೊಂದಿಗೆ ಹಂಚಿಕೊಳ್ಳುವ ಆಂತರಿಕ ಒತ್ತಾಯಕ್ಕೂ ಮಣಿದಿದ್ದರು. ಹೀಗಾಗಿ, ಅನ್ನಮಾಚಾರ್ಯರು ತಮ್ಮ ನುಡಿಗಳು ಅವರ ದಾರಿಗೆ ದೀಪವೂ, ಅವರ ಪಾದಗಳಿಗೆ ತೋರು ಹಣತೆಯೂ ಆಗಿ, ಸೇವೆ ಸಲ್ಲಿಸಲೆಂಬ ಆಶಯದಿಂದ ಸಾವಿರಾರು ಗೀತೆಗಳನ್ನು ರಚಿಸಿದರು.

ತಮ್ಮ ಸಂದೇಶವು ಸಾಮ್ರಾಟ-ಸಾಮಾನ್ಯ, ಪಂಡಿತ-ಪಾಮರ, ಹೀಗೆ ಎಲ್ಲರನ್ನೂ ಸಮಾನವಾಗಿ ತಲುಪಬೇಕಾಗಿರುವುದನ್ನು ಅವರು ಅರಿತಿದ್ದರು. ಹೀಗಾಗಿ ತಮಗೆ ಲಭ್ಯವಾದ ಎಲ್ಲವನ್ನೂ ಆಯ್ದುಕೊಂಡು, ಸುಸಂಬದ್ಧ ಶಾಸ್ತ್ರೀಯ ಛಂದದಿಂದ ಹಿಡಿದು ಸರಳ-ಸುಲಲಿತ ಜಾನಪದ ಧಾಟಿಯವರೆಗೂ; ಭೋಗ ಶೃಂಗಾರದಿಂದ ನಿಷ್ಠುರ

ತ್ಯಾಗದವರೆಗಿನ ಪ್ರತಿ ವಸ್ತುವನ್ನೂ, ಹಲವೊಮ್ಮೆ ನೇರಬೋಧನೆ-ಕೆಲವೊಮ್ಮೆ ಸೂಕ್ಷ್ಮ ಸೂಚನೆಯ ಮೂಲಕವೂ, ಬಳಸಿಕೊಂಡು ತಮ್ಮ ಮನವಿಯ ಸಾರವನ್ನು ತೀಕ್ಷ್ಣ ಧ್ವನಿಯಲ್ಲಿ ಸಾರಿದರು.

ಹರಿಯ ಚರಣಗಳಲ್ಲಿ
ಆಸರೆಯ ಕೋರಿದರೆ ಸಾಕು,
ಹರಿಯುವನೇ ನಿರ್ವಹಿಸುವನು
ಮೀರಿದುದೆಲ್ಲವನು.

ಇನ್ನೂ ಮಿಗಿಲಾಗಿ, ಭಕ್ತರಿಗೆ ಇಲ್ಲಿಯೂ ಮತ್ತು ಇಲ್ಲಿನ ನಂತರವೂ ಭಗವಂತನ ಕೃಪೆಯಿರುವುದನ್ನು ಸ್ಥಿರಪಡಿಸುವರು; ಹಾಗೂ ಈ ಭರವಸೆಗೆ ಸ್ವಾರಸ್ಯಕರ ವಿವರಣೆಯನ್ನೂ ನೀಡುವರು: ಶ್ರೀ ವೆಂಕಟೇಶ್ವರನಿಗೆ ಇಬ್ಬರು ಮಡದಿಯರು ಶ್ರೀದೇವಿ ಮತ್ತು ಭೂದೇವಿ. ವಿಶೇಷ ಸಂದರ್ಭಗಳಲ್ಲಿ ಆತನ ಉತ್ಸವಮೂರ್ತಿಯನ್ನು ಹೊರಗೊಯ್ಯುವಾಗ ಎರಡೂ ಬದಿಗಳಲ್ಲಿ ಈ ದೇವಿಯರ ಮೂರ್ತಿಗಳೂ ಇರುವುವು. ಶ್ರೀದೇವಿಯು ಸ್ವರ್ಗದೇವತೆಯಾಗಿದ್ದರೆ, ಭೂದೇವಿಯು ಮಾತೃಭೂಮಿ ಸ್ವರೂಪಳು. ಆದ್ದರಿಂದ ಭಕ್ತರ ಹಿತಾಸಕ್ತಿಯು ಸಂಪೂರ್ಣವಾಗಿ ಸುರಕ್ಷಿತವಾಗಿದೆಯೆಂಬ ಸಿದ್ಧಾಂತಕ್ಕೆ ಅನ್ನಮಾಚಾರ್ಯರು ಬರುತ್ತಾರೆ:

ಶ್ರೀ ವೆಂಕಟೇಶನೇ,
ಹೆಂಡಿರಿಬ್ಬರ ಕೂಡಿ
ತಿರುಗಾಡುವೆಯಲ್ಲೋ ನೀನು,
ಶ್ರೀದೇವಿ ಒಂದೆಡೆ
ಭೂದೇವಿ ಮತ್ತೊಂದೆಡೆ-
ಹೀಗಿರಲು ಅಚ್ಚರಿಯು ಏನುಂಟೋ?

ಈ ಭೂಮಂಡಲ
ಆ ಸ್ವರ್ಗಲೋಕ, ಎರಡೂ ಕಡೆಯಲಿ
ನಾವು ಉದ್ಧಾರಗೊಂಡಿರಲು?

೪

# ಅತ್ಯಮೂಲ್ಯ ಆಸ್ತಿ

ಯಾವುದೇ ಸಾಹಿತ್ಯದಲ್ಲಿ ಮೊತ್ತಮೊದಲು ರೂಪುಗೊಳ್ಳುವುದು ಜನಪದ ಹಾಡುಗಳು, ಅದರ ನಂತರವೇ ಛಂದೋಬದ್ಧ ಶೈಲಿಯ ರಚನೆಗಳು. ವಾಕ್ ಸಂಪ್ರದಾಯವು ತಪ್ಪದೆ, ಲಿಖಿತ ಕೃತಿಗಳಿಗಿಂತ ಮುಂಚೆಯೇ ಇರುತ್ತದೆ. ಹಾಡುಗಳು ಮಾನವನ ಐಹಿಕ ಜೀವನದ ಪ್ರತಿಯೊಂದು ಅರ್ಥಪೂರ್ಣ ಸಂಗತಿಯನ್ನೂ ಪ್ರಸ್ತಾಪಿಸುವುವು. ಅಲ್ಲದೆ ತೊಟ್ಟಿಲಿನಿಂದ ಚಟ್ಟದವರೆಗಿನ ದಾರಿಯಲ್ಲಿ ಅವನ ಘಟನಾಪೂರ್ಣ-ಪಯಣದ ಜಾಡನ್ನೂ ಗುರುತಿಸುವುವು. ಕೆಲವು ಬಾರಿ ಅವು ವ್ಯಕ್ತಿ ಮಾತ್ರವಲ್ಲದೆ ಇಡೀ ಸಮೂಹದ ಬದಲಾವಣೆಯನ್ನೂ ವಿವರಿಸುವುವು. ಹೀಗೆ ಹಳೆಯ, ಅಸಂತುಷ್ಟ, ದೂರದ ಸಂಗತಿಗಳು ಮತ್ತು ಬಲು ಹಿಂದಿನ ಸಂಘರ್ಷಗಳು ಕಲಕುವ ಭಾವನೆಗಳಿಗೆ ಸರಳ ಗೀತೆಗಳು ಸಂಕೀರ್ಣ ಅಭಿವ್ಯಕ್ತಿಯನ್ನು ನೀಡಬಲ್ಲವು; ಇಲ್ಲವೇ, "ಮೊದಲು ಇದ್ದ ಹಾಗೂ ಮತ್ತೆ ಇರಬಹುದಾದ ಕೆಲವೊಂದು ಸಹಜ ದುಗುಡ ಮತ್ತು ನೋವುಗಳ" ಕುರಿತು ಕಾಳಜಿ ಪಡುವುವು; ಆದರೆ ಧ್ವನಿಗಳು ಮಾತ್ರ ಯಾವಾಗಲೂ ವಿಷಾದಪೂರ್ಣವಾಗಿರವು. ಮಗುವೊಂದರ ಜನನ ಅಥವಾ ವಿವಾಹ ಸಮಾರಂಭದಿಂದ ಉಂಟಾದ ಸಂತೋಷವು ಚೈತನ್ಯಭರಿತ ಗೀತೆಯೊಂದರಲ್ಲಿ ಅಭಿವ್ಯಕ್ತಿಗೊಳ್ಳಬಹುದು; ಹಾಗೆಯೇ ಸಮರಭೂಮಿಯಲ್ಲಿ ಸಂಪಾದಿಸಿದ ವಿಜಯವು ವೀರಾವೇಶ ಹಾಗೂ ದೇಶಪ್ರೇಮ ಭಾವಗಳಿಂದ ಉಕ್ಕಿ ಹರಿಯುವ, ಚಿತ್ತ-ಕಲಕುವ ಲಾವಣಿಗಳಿಗೆ ಪ್ರೇರಣೆಯನ್ನು ಒದಗಿಸಬಹುದು.

ತೆಲುಗು ಸಾಹಿತ್ಯದ ಸಂದರ್ಭದಲ್ಲೂ ನಿಶ್ಚಯವಾಗಿ ಅದೇ ಆಗಿದೆ. (ಸಂಸ್ಕೃತದ) ಮಾರ್ಗ ಸಂಪ್ರದಾಯವನ್ನು ಆಧರಿಸಿದ ಶಾಸ್ತ್ರೀಯ ಕಾವ್ಯವು ಮೊದಲಿಗೆ ಕಂಡುಬಂದುದು, ಹನ್ನೊಂದನೇ ಶತಮಾನದ ನನ್ನಯನ 'ಮಹಾಭಾರತಮು' ಕೃತಿಯಲ್ಲಿ. ಆದರೆ ಆ ಕಾಲಕ್ಕಾಗಲೇ, ಸರಳ-ನಿರಾಡಂಬರ ರಾಗಗಳನ್ನು ಅಳವಡಿಸಿಕೊಂಡ, ವಿಶಾಲ ವೈವಿಧ್ಯದ ವಿಷಯಗಳ ಮೇಲಿನ, ಜನಪದ ಹಾಡುಗಳನ್ನೇ ಮುಖ್ಯವಾಗಿ ಒಳಗೊಂಡ ದೇಸೀಮಾರ್ಗವು ರೂಢಿಯಲ್ಲಿತ್ತೆಂಬುದನ್ನು ತೋರಿಸಲು ಆಧಾರಗಳಿವೆ. ಎರಡೂ ಪ್ರಕಾರಗಳು, ಹಲವು ಶತಮಾನಗಳ ಕಾಲ ಜೊತೆ ಜೊತೆಗೇ ಬೆಳೆದು ಬಂದಂತೆ ಕಾಣುವುದು. ವಿದ್ಯಾವಂತ ಕವಿಗಳು ಮಾರ್ಗ ಸಂಪ್ರದಾಯವನ್ನು ಅನುಸರಿಸಿ,

ಸಂಸ್ಕೃತದಿಂದ ಎರವಲು ಪಡೆದ ಛಂದಸ್ಸು ಮತ್ತು ನುಡಿಗಟ್ಟನ್ನು ಆರಿಸಿಕೊಂಡರೆ, ಸಾಮಾನ್ಯ ಜನತೆಯು ದೇಶೀ ಸಂಪ್ರದಾಯದಲ್ಲಿ, ಸ್ಥಳೀಯ ನುಡಿಗಟ್ಟಿನ ಸರಳ ಗೀತೆಗಳನ್ನು ರಚಿಸುವುದನ್ನು ಮುಂದುವರಿಸಿತು. ಹದಿಮೂರನೇ ಶತಮಾನದ ಶೈವಕವಿ ಪಾಲ್ಕುರಿಕೆ ಸೋಮನಾಥನು ತನ್ನ 'ಪಂಡಿತಾರಾಧ್ಯ ಚರಿತ್ರಂ' ಕಾವ್ಯದಲ್ಲಿ ಅಂತಹ ಹಲವು ಗೀತೆಗಳನ್ನು ಉದಾಹರಿಸುತ್ತಾನೆ. ಆತನು 'ಪದಮು' (ಗೀತೆ, ಹಾಡು) ಎಂಬ ಶಬ್ದವನ್ನು ಜನಪದ ಹಾಡುಗಳನ್ನು ಸೂಚಿಸಲು ಬಳಸುತ್ತಾನೆ; ಅಲ್ಲದೆ ಅದರ ಹಲವು ಬಗೆಗಳನ್ನೂ ಹೆಸರಿಸಿ ಪ್ರಸ್ತಾಪಿಸುತ್ತಾನೆ. 'ತುಮ್ಮೆದ ಪದಮುಲು' ಜೇನ್ನೊಣವನ್ನು ಕುರಿತ ಹಾಡು; 'ಪ್ರಭಾತ ಪದಮುಲು'-ಪ್ರಾತಃ ಕಾಲಕ್ಕೆ ಸಂಬಂಧಿಸಿದ ಹಾಡು; 'ವೆನ್ನೆಲ ಪದಮುಲು'-ಬೆಳದಿಂಗಳ ಪದಗಳು; 'ನೀವಾಲಿ ಪದಮುಲು'-ದೇವರ ಮುಂದೆ ಕರ್ಪೂರದಾರತಿ ಬೆಳಗುವ ಆರತಿ ಸಂದರ್ಭಗಳಲ್ಲಿ ಹಾಡುವ ಗೀತೆಗಳು, ಇತ್ಯಾದಿ. ದುರದೃಷ್ಟವಶಾತ್, ಆ ಎಲ್ಲ ಅನಾಮಧೇಯ ರಚನೆಗಳ ಇಡೀ ಸಂಗ್ರಹವು ಮುಂದಿನ ಪೀಳಿಗೆಗೆ ದೊರೆಯದಾಯಿತು. ಏಕೆಂದರೆ ಅವು ಮೌಖಿಕ ಪ್ರಸಾರಕ್ಕೆ ಮಾತ್ರ ಮೀಸಲಾಗಿದ್ದುವು ಮತ್ತು ಅದನ್ನು ಬರೆಹಕ್ಕೆ ಇಳಿಸಲು ಯಾರೊಬ್ಬರೂ ಗಮನ ನೀಡದಾದರು.

ಹೀಗಾಗಿ, ತೆಲುಗು ಭಾಷೆಯಲ್ಲಿ ಗೀತೆಗೆ (ಪದಮು) ಸುಸ್ಪಷ್ಟ ರೂಪವನ್ನು ಕೊಡುವುದು ಹಾಗೂ ತಮ್ಮ ಉದಾತ್ತ ಚಿಂತನೆ ಮತ್ತು ಉತ್ಕೃಷ್ಟ ಕೌಶಲದಿಂದ ಅದನ್ನು ಸಾಹಿತ್ಯಕ-ಔನ್ನತ್ಯಕ್ಕೆ ಎತ್ತರಿಸುವುದು, ಹದಿನೈದನೇ ಶತಮಾನದಲ್ಲಿ ಅನ್ನಮಾಚಾರ್ಯರ ಹೊಣೆಯಾಯಿತು. ಇದೇ ಕಾರಣಕ್ಕಾಗಿಯೇ ಅವರಿಗೆ 'ಪದ-ಕವಿತಾ ಪಿತಾಮಹ' (ಗೀತಾತ್ಮಕ ಹಾಡುಗಳ ಜನಕ) ಎಂಬ ಅತಿ ಸೂಕ್ತ ಬಿರುದನ್ನು ಅವರ ತರುವಾಯದವರು ಪ್ರದಾನ ಮಾಡಿದರು. 'ಸಂಕೀರ್ತನ ಲಕ್ಷಣಂ' ಎಂಬ ತಮ್ಮ ಸಂಸ್ಕೃತ ಶಾಸ್ತ್ರ-ಗ್ರಂಥದಲ್ಲಿ ಭಕ್ತಿಗೀತೆರಚನೆಯ ಕುರಿತಾದ ಸಿದ್ಧಾಂತವನ್ನು ಒದಗಿಸುವ ಮೂಲಕ, ಅವರು ಸಾಹಿತ್ಯಕ್ಕೆ ಮತ್ತೂ ಒಂದು ಸೇವೆಯನ್ನು ಸಲ್ಲಿಸಿದರು. 'ಪದಮು' ಮತ್ತು 'ಸಂಕೀರ್ತನೆ' ಎಂಬ ಶಬ್ದಗಳನ್ನು ತಾಳ್ಳಪಾಕ ಕವಿಗಳು ಪರಸ್ಪರ ಸಮಾನಾರ್ಥಕವೆಂಬಂತೆ ಪರಿಗಣಿಸಿದ ಹಾಗೆ ತೋರುತ್ತದೆ.

ಸಂಗೀತವನ್ನು ಕುರಿತ ಪುರಾತನ ಶಾಸ್ತ್ರಗ್ರಂಥದ ಅನುಸಾರ 'ಪ್ರಬಂಧ' ಎಂಬ ಪ್ರಕಾರದ ಸಂಗೀತ ರಚನೆಯು, ಸಂಸ್ಕೃತದಲ್ಲಿ ಪ್ರಾಚೀನಕಾಲದಿಂದಲೂ ಪ್ರಚಲಿತವಾಗಿದ್ದಿತು. ಅದು ರಾಗ, ತಾಳ, ಶಬ್ದ (ನುಡಿ), ಅರ್ಥ ಮತ್ತು ಸಂದರ್ಭಗಳನ್ನಾಧರಿಸಿದ ರಚನಾಶೈಲಿ ಮತ್ತು ತಂತ್ರದ ಹಲವಾರು ಪ್ರಭೇದಗಳನ್ನೂ ಹೊಂದಿತ್ತು. ಅಲ್ಲದೆ ಅದು ಪದಮು, ಸಂಕೀರ್ತನ ಮತ್ತು ಕೃತಿ ಎಂದು ವರ್ಗೀಕರಣಗೊಂಡ ಗೀತೆಗಳ ಮುಂಚೂಣಿಯಲ್ಲಿದ್ದಿತು. ಅನ್ನಮಾಚಾರ್ಯರು ಆ ಎಲ್ಲ ಶಾಸ್ತ್ರೀಯ ರಚನೆಗಳ ನಿಕಟ ಪರಿಜ್ಞಾನ ಹೊಂದಿದ್ದರೂ, ಅವುಗಳ ಸಂಕೀರ್ಣ ಮಾದರಿಗಳ ವ್ಯೂಹದಲ್ಲಿ ಸಿಲುಕಿಕೊಳ್ಳದಂಥ ಜಾಣತನವನ್ನು ಆಯ್ಕೆಮಾಡಿಕೊಂಡರು. ಬದಲಿಗೆ ತಮ್ಮ ಪದ್ಯಗಳಿಗೆ ಪ್ರಾದೇಶಿಕ ಧಾಟಿಗಳನ್ನಾಧರಿಸಿದ ನೇರ ಹಾಗೂ ಸರಳ ಚೌಕಟ್ಟನ್ನು ರೂಪಿಸಿಕೊಂಡರು.

ಕೃಷ್ಣಮಾಚಾರ್ಯರು ಎಂಬ ಹೆಸರಿನ ವೈಷ್ಣವ ಕವಿಯು 'ಸಿಂಹಗಿರಿ ವಚನಮುಲು' ಶೀರ್ಷಿಕೆಯ ಭಕ್ತಿ-ರಚನಾ ಮಾಲಿಕೆಯನ್ನು ತೆಲುಗಿನಲ್ಲಿ, ಹದಿಮೂರನೆಯ ಶತಮಾನದ ಕೊನೆಯಲ್ಲಿ ರಚಿಸಿ ಅವುಗಳನ್ನು 'ಸಂಕೀರ್ತನಮುಲು' ಮತ್ತು 'ಧ್ಯಾನ ಸಂಕೀರ್ತನಮುಲು' ಎಂದು ಕರೆದರು. ಅವು ಸಿಂಹಾಚಲದ ಶ್ರೀ ನರಸಿಂಹನನ್ನು ಹರ್ಷಾವೇಶದಿಂದ ಸಂಬೋಧಿಸುವುದಾಗಿದ್ದು, ಹಾಡಲೆಂದು ಉದ್ದೇಶಿತವಾಗಿದ್ದರೂ, ಗೀತ-ಗದ್ಯವಾಗಿ ಹೆಣೆಯಲಾಗಿದ್ದರಿಂದ ಅವುಗಳು ಗೀತೆಗಳ ಶುದ್ಧ ಸ್ವರೂಪವನ್ನು ಪಡೆದುಕೊಳ್ಳಲಿಲ್ಲ. ಈ ಕಾರಣಕ್ಕಾಗಿ ಅವು 'ವಚನ ಗೀತಮುಲು' ಎಂಬುದಾಗಿ ವರ್ಗೀಕೃತಗೊಂಡವು. ಅನ್ನಮಾಚಾರ್ಯರಿಗೆ ಅವುಗಳ ಪರಿಚಯವಿದ್ದಿತಾದರೂ, ತಮ್ಮ ಭಕ್ತಿಗೀತೆಗಳಿಗೆ ಸ್ವಂತ ಆಕಾರವನ್ನು ರೂಪಿಸಿಕೊಂಡಿದ್ದರಿಂದ, ಅವುಗಳಿಗೆ ಸ್ವಲ್ಪವೂ ಋಣಿಯಾಗಲಿಲ್ಲ. ಹಾಗಿದ್ದರೂ ಅವರ ಗೀತೆಗಳ ರೂಪವು ಸ್ವಲ್ಪಮಟ್ಟಿಗಾದರೂ ಆಕೃತಿಗೊಂಡಿರುವುದು, ಕರ್ನಾಟಕದ ದಾಸಕವಿಗಳ ಪದ್ಯಗಳಿಂದ. ಹರಿದಾಸ ಪರಂಪರೆಯು ಆ ಪ್ರದೇಶದಲ್ಲಿ ಹದಿನಾಲ್ಕನೆಯ ಶತಮಾನದ ಕೊನೆಯಭಾಗದಲ್ಲಿ ಪ್ರಾರಂಭವಾಯಿತು; ಸಂತ ಕವಿಗಳಾದ ನರಹರಿ ತೀರ್ಥರು ಮತ್ತು ಶ್ರೀಪಾದರಾಯರ ಭಕ್ತಿಗೀತೆಗಳು ಅನ್ನಮಾಚಾರ್ಯರಿಗೆ ತಿಳಿದಿದ್ದು, ಅವರ ಕಾಯಕ ಹಾಗೂ ಗೀತೆಗಳ ಸ್ವರೂಪ ಎರಡರ ಆಯ್ಕೆಯಲ್ಲಿಯೂ, ಅವು ತಕ್ಕಮಟ್ಟಿನ ಪ್ರಭಾವವನ್ನು ಬೀರಿವೆ.

ಅನ್ನಮಾಚಾರ್ಯರು ಕಲ್ಪಿಸಿದ 'ಪದಮು' (ಗೀತೆ) ಎರಡು ಮುಖ್ಯ ಘಟಕಗಳನ್ನು ಹೊಂದಿದೆ: 'ಪಲ್ಲವಿ' ಮತ್ತು 'ಚರಣಮು.' 'ಪಲ್ಲವಿ'ಯು ಒಂದೆರಡು ಸಾಲಿನ ಪೀಠಿಕಾ ಭಾಗ, ಅದು ಗೀತೆಯ ಕೇಂದ್ರ ಚಿಂತನೆಯನ್ನು ವ್ಯಕ್ತಗೊಳಿಸುವುದಲ್ಲದೆ ಗೀತೆಯುದ್ದಕ್ಕೂ ಪುನರಾವರ್ತನೆಗೊಳ್ಳುವಂಥದು. 'ಚರಣ'ವಾದರೋ ನಂತರದ ಪದ್ಯ, ಸಾಮಾನ್ಯವಾಗಿ ಚೌಪದಿಯ ಸ್ವರೂಪದಲ್ಲಿರುವುದು; ಪ್ರಧಾನ ಆಶಯವನ್ನು ಬೆಂಬಲಿಸುವ, ಕೆಲವೊಮ್ಮೆ ಸ್ಪಷ್ಟೀಕರಿಸುವ ಉದ್ದೇಶವುಳ್ಳದ್ದು. ಹೆಚ್ಚಿನ ಗೀತೆಗಳಲ್ಲಿ, ಪ್ರಾರಂಭದಲ್ಲಿ ಪ್ರಸ್ತಾಪಿಸಿದ ಚಿಂತನೆಯನ್ನು ಗಟ್ಟಿಗೊಳಿಸಲು ಅಂತಹ ಹಲವಾರು ಪದ್ಯಗಳನ್ನು ಒಟ್ಟಾಗಿ ಪೋಣಿಸಲಾಗಿರುತ್ತದೆ. ಪಲ್ಲವಿಯಲ್ಲಿ ಸೂಚಿತವಾದ ಆಶಯಕ್ಕೆ ಒತ್ತಾಸೆ ನೀಡುವುದಕ್ಕಾಗಿ, ಅಂತಹ ಮೂರು ಪದ್ಯಗಳು ಸರಣಿಯಲ್ಲಿರುವ ಗೀತೆಗಳನ್ನು, ಅನ್ನಮಾಚಾರ್ಯರು ಬಾರಿಬಾರಿಗೂ ಪ್ರಸ್ತುತ ಪಡಿಸುವರೆಂಬುದನ್ನು ಗಮನಿಸಬಹುದು. ಒಮ್ಮೊಮ್ಮೆ ಮುಖ್ಯ ಚಿಂತನೆಯನ್ನು ಒಂದೇ ವಾಕ್ಯದಲ್ಲಿ ಅಡಕ ಮಾಡಲಾಗದುದರಿಂದ, ಆ ಸಂದರ್ಭಗಳಲ್ಲಿ ಒಂದು ಪೂರಕ ವಾಕ್ಯವನ್ನು ಪಲ್ಲವಿ ಮತ್ತು ಮೊದಲ ಚರಣಗಳ ನಡುವೆ ಅಳವಡಿಸಲಾಗುವುದು. ಈ ಹೆಚ್ಚುವರಿ ವಾಕ್ಯವನ್ನು ಅನುಪಲ್ಲವಿಯೆಂದು ಕರೆಯಲಾಗುವುದು. ಅದರ ಸೇರ್ಪಡೆ ಮಾಡಿದಾಗ, ಗೀತೆಯು ಮೂರು ಭಾಗಗಳ ರಚನೆಯಾಗಿ ವಿಸ್ತೃತಗೊಳ್ಳುವುದು. ತ್ಯಾಗರಾಜರು ಬಹಳಷ್ಟು ಬಾರಿ ಅಂತಹ ತ್ರಿ-ಹಂತದ ಅಚ್ಚನ್ನು ತಮ್ಮ ಕೀರ್ತನೆಗಳಿಗೆ ಬಳಸಿಕೊಂಡರಾದರೆ, ಅನ್ನಮಾಚಾರ್ಯರು ಮಾತ್ರ ದ್ವಿ-ಘಟಕದ ಸ್ವರೂಪಕ್ಕೇ ಪ್ರಾಶಸ್ತ್ಯ ನೀಡಿದ್ದು, ಅನುಪಲ್ಲವಿಯನ್ನು ಅಪರೂಪವಾಗಿ ಮಾತ್ರ ಅಳವಡಿಸಿಕೊಂಡರು.

ಅನ್ನಮಾಚಾರ್ಯರ ಬಹುತೇಕ ಗೀತೆಗಳಿಗೆ ಸಾಮಾನ್ಯವಾಗಿರುವ ದ್ವಿಹಂತದ

ಚೌಕಟ್ಟನ್ನು, ಅವರ ಅಧ್ಯಾತ್ಮಿಕ ಕೃತಿಯೊಂದರ ರಚನಾಕ್ರಮವನ್ನು ಪರಿಶೀಲಿಸುವುದರಿಂದ ಚೆನ್ನಾಗಿ ಅರ್ಥಮಾಡಿಕೊಳ್ಳಬಹುದು.

ನಿನ್ನ ಭಕುತರು, ವರಗಳಿಂದ ಉಕ್ಕಿ ಹರಿವರೋ
ನಿನ್ನ ತೆರನ ಬೇರೆ ದೇವರನು ಅವರೆಲ್ಲಿ ಕಾಣುವರೋ?
ಅಂಗೈಯನು ಎತ್ತಿ ಹಿಡಿದು ಕಾದಿರುವೆ ನೀನು[32]
'ವಿಧೇಯ ಸೇವಕರನು ಎಂದೆಂದೂ ಕಾಯುತಿರುವೆ ನಾನೆಂದು'
ಲೋಕದೆಲ್ಲ ಪಾತಕಗಳನು ಪರಿಹರಿಸಬಲ್ಲ,
ನಿನ್ನ ರಹಸ್ಯ ಹೆಸರನೆಲ್ಲೆಲ್ಲು ಪಸರಿಸಿಹೆಯಲ್ಲೋ?
ಶ್ರೀದೇವಿಯನು ನಿನ್ನ ಎದೆಯಲೇ ಧರಿಸಿದೆ,
ಕೋರಿದೆಲ್ಲರಿಗೆ ಸಿರಿಯ ವಿತರಿಸಲೆಂದೇ;
ನಿನ್ನ ಪಾದದಿಂದಲೇ ನದಿಯೊಂದ ಹರಿಸಿದೆ,
ನೊಂದ ಜೀವರನೆಲ್ಲ ಪಾವನಗೊಳಿಸಲೆಂದೇ.
ಬ್ರಹ್ಮನನು ನಿನ್ನ ನಾಭಿಯಿಂದಲೇ ಹೊರತಂದೆ,
ಭುವಿಯನವನು ಜೀವರುಗಳಿಂದ ತುಂಬಿಸಲೆಂದೇ;
ಎಲ್ಲೆಡೆಗೂ ಸದಾ ಕಣ್ಗಾವಲಾಗಿರಲೆಂದೇ,
ವೆಂಕಟಾದ್ರಿಗಿರಿಯ ತುದಿಯಲ್ಲಿ ನೀ ನಿಂದೆ.

ಮೊದಲೆರಡು ಸಾಲುಗಳು ಗೀತೆಯ ಪ್ರಾಥಮಿಕ ಭಾಗವಾದ 'ಪಲ್ಲವಿ'ಯಾಗಿರುತ್ತದೆ. ಅದು ಮೂರು ಚೌಪದಿಗಳಿಂದ ಅನುಸರಿಸಲ್ಪಟ್ಟಿದೆ ಮತ್ತು ಈ ಪದ್ಯಗಳೆಲ್ಲವೂ ಸೇರಿ ತೆಲುಗಿನಲ್ಲಿ 'ಚರಣಮುಲು' ಎಂದು ಕರೆಯಲಾಗುವ ದ್ವಿತೀಯ ಘಟಕವಾಗಿದೆ.

ಶ್ರೀ ವೆಂಕಟೇಶ್ವರನನ್ನು ಉದ್ದೇಶಿಸಿರುವ ಈ ಗೀತೆಯು, ಆತನ ಅನಂತ-ಮಹಿಮೆಯನ್ನು ಕೊಂಡಾಡಲೆಂದೇ ರೂಪಿತವಾಗಿದೆ. ತನ್ನ ಭಕ್ತರ ಮೇಲೆ ಆತನು ಮಳೆಗರೆದ ಅಪಾರ ಕರುಣೆಯೇ, ದೈವಗಳ ಪೈಕಿ ಆತನ ಸರ್ವೋತ್ತಮತ್ವವನ್ನು ಸ್ಥಿರಗೊಳಿಸುತ್ತದೆ ಹಾಗೂ ಈ ಕೇಂದ್ರ ಭಾವವು 'ಪಲ್ಲವಿ'ಯಲ್ಲಿ ಒತ್ತಿ ಹೇಳಲ್ಪಟ್ಟಿದೆ. ಇದನ್ನು ಅನುಸರಿಸಿಬರುವ ಪದ್ಯಗಳು ಭಕ್ತರ ಬಗೆಗಿನ ಭಗವಂತನ ದಯಾಪೂರ್ಣ ಕಾಳಜಿಯ ಕೆಲವು ನಿರ್ದಿಷ್ಟ ಸಂಗತಿಗಳನ್ನು ಉದಾಹರಿಸುತ್ತಾ, ಪ್ರತಿ ಪದ್ಯವೂ ಮತ್ತೆರಡು ಉಪವಿಭಾಗವಾಗಿ ವಿಂಗಡಿತಗೊಂಡಿರುವುದನ್ನು ಇಲ್ಲಿ ಗಮನಿಸಬಹುದು: ಅವುಗಳಲ್ಲಿ ಒಂದೊಂದೂ, ಎರಡು ಸಾಲಿನದಾಗಿದ್ದು ಆತನ ದಯಾಪರತೆಗೆ ಪುರಾವೆಗಳನ್ನು ಪಟ್ಟಿ ಮಾಡುವುದು. ಹಾಗಾಗಿ ಇಲ್ಲಿ ಮೂಲ ಸಿದ್ಧಾಂತಕ್ಕೆ 'ಆಧಾರಸ್ತಂಭ'ವಾಗಬಲ್ಲ, ಆರು ವಿವರಣೆಗಳಿರುವುವು:

1. ತನಗೆ ಶರಣಾಗುವವರನ್ನು ಪೊರೆಯಲು ಆತನು ತಾನಾಗಿಯೇ, ಸರ್ವದಾ ಸಿದ್ಧತೆಯ ಸ್ಥಿತಿಯಲ್ಲಿರುವನು: ಈ ಕಾಳಜಿಯನ್ನು ಅಭಯಪ್ರದಾನದ ಸಂಕೇತವಾಗಿ ಒದಗಿಬರುವ ಎತ್ತಿದ-ಅಂಗೈ ಮೂಲಕ ವ್ಯಕ್ತಗೊಳಿಸಲಾಗಿದೆ.

2. ಜಗತ್ತಿನ ದುಃಖಿತ ಜೀವಿಗಳನ್ನು ಪಾಪಗಳಿಂದ ಮುಕ್ತಗೊಳಿಸಲು ಮತ್ತು ಅವರನ್ನು ಸಂಕಷ್ಟಗಳಿಂದ ಬಿಡುಗಡೆ ಮಾಡುವ ದೃಷ್ಟಿಯಿಂದ, ಆತನು ತನ್ನ ಪಾವನ-ನಾಮ ಮತ್ತು ಮಂತ್ರವು ಎಲ್ಲೆಡೆಗೂ ಪ್ರಚಾರವಾಗುವಂತೆ ತಾನೇ ನಿಶ್ಚಯಗೊಳಿಸಿಕೊಳ್ಳುವನು.

3. ಸಮೃದ್ಧಿ ಮತ್ತು ಪ್ರಸನ್ನತೆಯ ದೇವಿಯಾದ ಲಕ್ಷ್ಮಿಯನ್ನು ಆತನು ಯಾವಾಗಲೂ ತನ್ನ ಹೃದಯದಲ್ಲಿಯೇ ಧರಿಸಿರುವನು, ಆದರಿಂದ ತನ್ನನ್ನು ಬೇಡಿದವರಿಗೆ ಸೌಭಾಗ್ಯದ ವರಗಳನ್ನು ಕೊಡಬಲ್ಲ ಸ್ಥಿತಿಯಲ್ಲಿ ಸದಾ ಇರುವನು.

4. ಮೂರು ಲೋಕಗಳಲ್ಲೆಲ್ಲೂ, ತನ್ನಲ್ಲಿ ಮೀಯುವವರ ಸಂಚಿತ ಪಾಪಗಳನ್ನು ತೊಳೆಯಬಲ್ಲ ಅತಿ ಪವಿತ್ರ ಗಂಗಾನದಿಯನ್ನು, ತನ್ನ ಪಾದಗಳ ಮೂಲಕವೇ ಹರಿಯಲು ಬಿಡುವ ಮೂಲಕ ಅವರನ್ನು ಪರಿಶುದ್ಧಗೊಳಿಸುವನು ಹಾಗೂ ಅದರಿಂದ ತಮ್ಮ ಪೂರ್ವಪಾಪಕರ್ಮಗಳ ಪರಿಣಾಮದಿಂದ ಅವರು ತಪ್ಪಿಸಿಕೊಳ್ಳುವಂತೆ ಮಾಡುವನು.

5. ತನ್ನ ಲೀಲೆಯ ಒಂದು ಭಾಗವಾಗಿ ಬ್ರಹ್ಮನಿಗೆ ಜನ್ಮಕೊಟ್ಟು, ಆತನು ಎಲ್ಲ ಜೀವರುಗಳ ಸೃಷ್ಟಿಕರ್ತನಾಗಿ ಜಗತ್ತನ್ನು ಜೀವರಾಶಿಗಳಿಂದ ತುಂಬಿಸುವಂತೆ ಮಾಡಿ, ತನ್ನ ಕ್ರೀಡೆಯು ಮುಂದುವರಿಯುವಂತೆ ನೋಡಿಕೊಳ್ಳುವನು.[33]

6. ಬೆಟ್ಟವೊಂದರ ತುದಿಯಲ್ಲಿ ನಿಂತುಕೊಂಡು, ಆದರಿಂದ ಎಲ್ಲ ದಿಕ್ಕುಗಳನ್ನೂ ಕಣ್ಣಿಟ್ಟು ನೋಡಿಕೊಳ್ಳುತ್ತಾ, ತನ್ಮೂಲಕ ತನ್ನ ಭಕ್ತರ ಕಲ್ಯಾಣವನ್ನು ದೃಢಪಡಿಸಿಕೊಳ್ಳುವನು.

ಹೀಗೆ, ಪದ್ಯದ ಎರಡನೆಯ ಭಾಗದಲ್ಲಿನ ಮೂರು ಪದ್ಯಗಳು ಒಂದು ಸಂಯೋಜಿತ ಪರಿಣಾಮವನ್ನು ನೀಡಿ, 'ಎಲ್ಲ ದೇವರಿಗಿಂತ ವಿಷ್ಣುವೇ ಹೆಚ್ಚು ಕರುಣಾಳು; ಆದ್ದರಿಂದಲೇ ಆತನ ಭಕ್ತರು ತಮ್ಮನ್ನು ತಾವೇ ನಿರಂತರ ಅನುಗ್ರಹಿತ ಸ್ಥಿತಿಯಲ್ಲಿಟ್ಟುಕೊಳ್ಳುವರು' ಎಂಬ ಗೀತೆಯ ಮೂಲತತ್ವವನ್ನು ಸಂಪೂರ್ಣ ಬಲಪಡಿಸುವುವು.

ಶಬ್ದೋತ್ಪತ್ತಿ ಶಾಸ್ತ್ರದಂತೆ 'ಕೀರ್ತನಂ' ಪದದ ಅರ್ಥವು 'ಸ್ತೋತ್ರಗಳ ಗಾಯನ' ಎಂದಾಗುವುದು: ಹಾಗೂ ಅನ್ನಮಾಚಾರ್ಯರ ಕೃತಿಗಳು ಇದರ ಉದ್ದೇಶವನ್ನು ಬಹು ಪರಿಣಾಮಕಾರಿಯಾಗಿ ನಿರ್ವಹಿಸುವುದರಿಂದ ಅವು ಆ ಹಣೆಪಟ್ಟಿಯನ್ನು ಹೊಂದಲು ತುಂಬಾ ಅರ್ಹವಾಗಿರುವುದು ಸಿದ್ಧಗೊಂಡಿದೆ. ಅದೇ ಕಾರಣಕ್ಕಾಗಿಯೇ, ಅವರ ಸಮಕಾಲೀನರು ಅನ್ನಮಾಚಾರ್ಯರಿಗೆ 'ಹರಿಕೀರ್ತನಾಚಾರ್ಯ' (ವಿಷ್ಣು-ಸ್ತೋತ್ರ

ಗಾಯನ ಗುರು) ಎಂಬ ಅಭಿವಂದನಾಪೂರ್ವಕ ಅಭಿಧಾನವನ್ನು ನೀಡಿದರು.

ಸಂಸ್ಕೃತದ ಅಭಿಜಾತ ಕೃತಿಗಳ ರೂಪಾಂತರ ಅಥವಾ ಅನುವಾದಗಳನ್ನು ಹೊರತಂದ, ಹಾಗೂ 'ಮಾರ್ಗ'ಸಂಪ್ರದಾಯದಲ್ಲಿ ಬರೆಯುಬಯಸಿದ ಲೇಖಕರಿಗೆ ಮಾತ್ರವೇ ಕೀರ್ತಿ ಮತ್ತು ಸಂಪತ್ತುಗಳು ಮೀಸಲಾಗಿರುತ್ತಿದ್ದ ಕಾಲದಲ್ಲಿ ಹಾಗೂ ಜನಪದ ಗೀತೆಗಳು ಮತ್ತು ಪದ್ಯಗಳನ್ನು ವಿದ್ವಾಂಸರು ಮತ್ತು ವಿಮರ್ಶಕರು ಮುಚ್ಚುಮರೆಯಿಲ್ಲದೆಯೇ ಕೀಳುಗಳೆಯುತ್ತಿದ್ದ ಕಾಲದಲ್ಲಿ, ಅನ್ನಮಾಚಾರ್ಯರು ಗ್ರಾಮ್ಯ ಶೈಲಿಯ ಮತ್ತು ದೇಶೀ ಸಂಪ್ರದಾಯದ ಭಕ್ತಿ-ಕವನಗಳ ರಚನಾಕಾರರಾಗಿ ಉಳಿದುಕೊಂಡರು. ಇದಕ್ಕೆ 'ಹರಿಕೀರ್ತನಾಚಾರ್ಯ'ರಾಗುವುದಕ್ಕಿಂತ ಹಿರಿದಾದ ಗೌರವ ಅಥವಾ ಅನುಗ್ರಹವನ್ನು ಅವರು ಕಲ್ಪಿಸಿಕೊಳ್ಳಲಾರದೆ ಹೋದುದೇ ಏಕೈಕ ಕಾರಣ. ಆದರೂ ಇದು ಭಕ್ತಿ-ಕವನಗಳ ಸಾಹಿತ್ಯಕ ಸತ್ವವನ್ನು ಅಲಕ್ಷಿಸಿದ ಆ ಕಾಲದ ವಿದ್ವಾಂಸರ ಅಭಿರುಚಿ-ಹೀನತೆ ಮತ್ತು ವಿವೇಚನಾ ಶೂನ್ಯತೆಯ ವಿಷಾದನೀಯ ಪ್ರತಿಬಿಂಬವಾಗಿದೆ ಎಂಬ ಅಂಶವೇನೂ ಕಡಿಮೆಯಾದುದಲ್ಲ. ಈ ವಿಷಯವನ್ನು ಕುರಿತು ಬ್ರಿಟಿಷ್ ನಾಗರಿಕ ಸೇವೆಯಲ್ಲಿದ್ದ ಎ. ಗ್ಯಾಲೆಟ್ ಎಂಬುವವರ ಪ್ರತಿಕ್ರಿಯೆಯು ವಾಸ್ತವ ಸಂಗತಿಯನ್ನು ಸ್ಪಷ್ಟವಾಗಿ ಹೊರತಂದಿದೆ. "ಗ್ರಾಮ್ಯ ಅಂಡ್ ಗ್ರಾಮರ್" ಎಂಬ ತಮ್ಮ ಪ್ರಬಂಧದಲ್ಲಿ ಅವರು ಬರೆಯುತ್ತಾರೆ: "ಇತರ ಸಮಾಜಗಳ ನಡುವೆ ಮತ್ತು ಇತರ ಯುಗಗಳಲ್ಲಿಯೂ ಕೂಡ ಸಾಹಿತ್ಯದ ಶ್ರೇಷ್ಠ ಕಾಲವು ಪದ್ಯದೊಂದಿಗೇ ಪ್ರಾರಂಭವಾಗಿರುತ್ತದೆ. ಆಂಧ್ರದೇಶವು ಸಹಜವಾಗಿ, ಸಂತತವಾಗಿ ಮತ್ತು ಸುಮಧುರವಾಗಿ ಹಾಡುವುದು... ಆದರೆ, ತೆಲುಗು ಸಾಹಿತ್ಯವು ತೆಲುಗು ಪದ್ಯವನ್ನು ಅಲಕ್ಷಿಸಿದೆ ಮತ್ತು ತಾತ್ಸಾರ ಮಾಡಿದೆ. ಅದು ಪರದೇಶದ ಗೀತರಚನಾ ಕ್ರಮವನ್ನು ಆಮದು ಮಾಡಿಕೊಂಡಿದೆ. ಹಾಗೂ ಅಲ್ಲಿ, ಎರವಲು ದಿರಿಸುಗಳಿಂದ ಸಂಕೋಚವಾಗುವ ಹಾಗೆ, ಭಾಷೆಯು ಅಸುಖಕರವಾಗಿ ಹರಿದಾಡುವುದು."

ಆಂಧ್ರಪ್ರದೇಶದಲ್ಲಿ ಸಂಸ್ಕೃತಾಭ್ಯಾಸಕ್ಕೆ ಆ ಕಾಲದಲ್ಲಿ ದೊರೆಯುತ್ತಿದ್ದ ಅಸಾಧಾರಣ ಮನ್ನಣೆ, ಹಾಗೂ ತತ್ಪರಿಣಾಮವಾಗಿ, ಸಂಸ್ಕೃತದ ಮೂಲದ್ರವ್ಯ ಮತ್ತು ಸಾಹಿತ್ಯಕ ಪರಂಪರೆಯು ಪ್ರಾರಂಭಿಕ ತೆಲುಗು ಸಾಹಿತ್ಯದ ಮೇಲೆ ಹೊಂದಿದ್ದ ಪ್ರಭುತ್ವವು, ವಿದ್ವಾಂಸರು ಕೀರ್ತನೆಗಳ ಕುರಿತಾಗಿ ಆ ರೀತಿಯ ಧೋರಣೆಯನ್ನು ತಳೆಯಲು ಕಾರಣವಾಯಿತೆಂದು ಕಾಣುತ್ತದೆ. ಅವರು, ಅವು ಕೇವಲ ಹಳ್ಳಿಯ ಹೆಂಗಸರಿಗೆ ಮನರಂಜನೆ ನೀಡಲು ಮಾತ್ರ ಯೋಗ್ಯವಾದುದೆಂದು ಪರಿಗಣಿಸಿ, ಅವುಗಳನ್ನು ತಮ್ಮ ಗಮನಕ್ಕೆ ತೆಗೆದುಕೊಳ್ಳಲೂ ತಕ್ಕುದಲ್ಲವೆಂದು ದೂರವೇ ಇಟ್ಟಿದ್ದರು. ವಿದ್ವಾಂಸರ ಈ ಉದ್ಧಟತನವು ತೆಲುಗು ಭಾಷೆಗೆ ಮಾತ್ರ ವಿಶಿಷ್ಟವಾದ ಸ್ಥಿತಿಯೆಂದು ತೋರುತ್ತದೆ. ಆದರೆ ಇತರ ಭಾಷೆಗಳಲ್ಲಿ, ಗೀತಕಾರರಿಗೆ ಗೌರವಸ್ಥಾನವು ಸಿದ್ಧವಾಗಿ ದೊರೆಯುತ್ತಿದ್ದುದು ಸ್ಪಷ್ಟವಾಗಿದೆ. ಉದಾಹರಣೆಗೆ ತಮಿಳಿನಲ್ಲಿ ಆಳ್ವಾರರು ಮತ್ತು ನಯನ್ಮಾರರ 'ಪಾಸುರಂ'ಗಳು, ಕನ್ನಡದಲ್ಲಿ ದಾಸಕವಿಗಳ ದೇವರನಾಮಗಳು, ಮರಾಠಿಯಲ್ಲಿ ಸಂತಕವಿಗಳ 'ಅಭಂಗ'ಗಳು, ಬಂಗಾಳದ ವೈಷ್ಣವ ಗಾಯಕರ 'ಪದಾವಲಿ'ಗಳು, ಹಾಗೂ

ಹಿಂದಿಯಲ್ಲಿ ಅನುಭಾವಿ-ಕವಿಗಳ ಅಸಂಖ್ಯಾತ ಭಕ್ತಿ-ರಚನೆಗಳನ್ನು, ಅವುಗಳ ಸಾಹಿತ್ಯಕ ಮೌಲ್ಯಗಳಿಗಾಗಿ, ನಿಧಿಯ ಹಾಗೆ ಸದಾ ಕಾಯ್ದುಕೊಂಡು ಬರಲಾಗಿದೆ.

ಇಬ್ಬರು ಪ್ರಮುಖ ತೆಲುಗು ರಚನಾಕಾರರಾದ ಕ್ಷೇತ್ರಯ್ಯ ಮತ್ತು ತ್ಯಾಗರಾಜರ ಕೃತಿಗಳು, ಹಿಂದೆ ಸಾಕಷ್ಟು ಮನ್ನಣೆ ಗಳಿಸಿದ್ದುದೇನೋ ನಿಜ, ಆದರೆ ಇದು ಬೇರೆ-ಬೇರೆ ಕಾರಣಗಳಿಗಾಗಿ ಮಾತ್ರ. ಕ್ಷೇತ್ರಯ್ಯನವರ 'ಮುವ್ವ-ಗೋಪಾಲ ಪದಮುಲು'ಗಳ ಜನಪ್ರಿಯತೆಯು ಋಣಿಯಾಗಿರಬೇಕಾದುದು, ಅವು ನೃತ್ಯ-ಪ್ರದರ್ಶನದಲ್ಲಿನ 'ಅಭಿನಯ'ಕ್ಕೆ (ಅಂಗಚಲನೆಗಳ ಮೂಲಕ ಅಭಿವ್ಯಕ್ತಿ) ಅತ್ಯಂತ ಸೂಕ್ತವಾದವು ಎಂಬ ಸಂಗತಿಗೆ. ತ್ಯಾಗರಾಜರ ಕೃತಿಗಳಾದರೋ ಅವೆಷ್ಟೇ ಸಮೃದ್ಧವಾಗಿದ್ದರೂ ಮನ್ನಣೆ ಪಡೆದಿರುವುದು ತಮ್ಮ ಸಾಹಿತ್ಯಕ ಸಾಮರ್ಥ್ಯದಿಂದಲ್ಲ. ಬದಲಿಗೆ ಅದು, ಕರ್ನಾಟಕ ಸಂಗೀತಗಾರರು ಕಛೇರಿಗಳಲ್ಲಿ ಭಾಗವಹಿಸುವಾಗ ತಮ್ಮನ್ನು ಮೊದಲನೆಯದಾಗಿ ಆಯ್ಕೆಮಾಡಿಕೊಳ್ಳಲು ಕಾರಣವಾದ ತಮ್ಮಲ್ಲಿನ ಗೇಯ ಗುಣದಿಂದಷ್ಟೇ. ಅವರಲ್ಲಿ ನಾವು ಕಾಣುವುದು-ರಾಮನನ್ನೇ ತಮ್ಮ ಏಕಮಾತ್ರ ಒಡೆಯನೆಂದು ನಂಬಿದ ಹಾಗೂ ಆತನನ್ನು ಆರಾಧಿಸಲಿಕ್ಕಾಗಿ ತಮ್ಮ ಇಡೀ ಜೀವಮಾನವನ್ನೇ ಸವೆಸಿದ, ಸಂತ-ಕವಿಯನ್ನು. ತಮ್ಮ ಭಾವನೆಗಳನ್ನವರು, ಕೀರ್ತನೆಯ ನಂತರದ ಇನ್ನೂ ಉತ್ಕೃಷ್ಟ ಕೀರ್ತನೆಗಳಲ್ಲಿ ತೋಡಿಕೊಂಡರು. ಒಮ್ಮೆ ಆತನನ್ನು ಕೊಂಡಾಡುವ, ಮತ್ತೊಮ್ಮೆ ವಿನೋದ ಮಾಡುವ, ಒಮ್ಮೊಮ್ಮೆ ತಮ್ಮನ್ನು ಅಲಕ್ಷಿಸಿದುದಕ್ಕಾಗಿ ಆಕ್ಷೇಪಿಸುವ, ಹಲವೊಮ್ಮೆ ಆತನ ದೈವೀ-ಮಧ್ಯಸ್ಥಿಕೆಗಾಗಿ ವ್ಯಥೆಯ ಆರ್ತಮೊರೆಯನ್ನು ತೋಡಿಕೊಳ್ಳುವ- ಹೀಗೆ ಆತನನ್ನು ಕುರಿತಾದ ಮಾನವಭಾವನೆಗಳ ಸಂಪೂರ್ಣ ಸರಣಿಯನ್ನೇ ಪ್ರಸ್ತುತಪಡಿಸಿದರು. ಆದರೂ, ಅವರು ದಕ್ಷಿಣ-ಭಾರತೀಯ ಶಾಸ್ತ್ರೀಯ ಸಂಗೀತಕ್ಕೆ ನೀಡಿದ ಅತ್ಯಮೂಲ್ಯ ಕೊಡುಗೆಯ ವಿನಾ ತಮ್ಮ ಕಾವ್ಯಸಾಧನೆಗಾಗಿ ಸಲ್ಲಲೇಬೇಕಾಗಿದ್ದ ಮನ್ನಣೆಗೆ ಇನ್ನೂ ಪಾತ್ರರಾಗದೆ ಹೋಗಿರುವುದು ವಿಷಾದನೀಯವಾದ ಸಂಗತಿ.

'ಮಾರ್ಗ' ಸಂಪ್ರದಾಯವನ್ನು ಆಯ್ಕೆ ಮಾಡಿಕೊಂಡು, ಅದರಿಂದಲೇ ಸಾಹಿತ್ಯ-ಚರಿತ್ರೆಯಲ್ಲಿ ತಮಗೆ ತಾವೇ ಸ್ಥಾನಗಳನ್ನು ಗಳಿಸಿಕೊಂಡ ಅನ್ನಮಾಚಾರ್ಯರ ಸಮಕಾಲೀನರ ಪೈಕಿ, ಬಮ್ಮೇರ ಪೋತನ, ತಮ್ಮ ಚಿಂತನೆ ಮತ್ತು ಸತ್ವಗಳಲ್ಲಿ ಅವರ ಸನಿಹಕ್ಕೆ ಬರುತ್ತಾರೆ. ಕಿಂಚಿತ್ ಅವಕಾಶ ದೊರೆತರೂ, ವಿಷ್ಣುಭಕ್ತಿಯನ್ನು ಪ್ರಚುರಪಡಿಸುವ ಅದಮ್ಯ ಉತ್ಸಾಹದ ಧಾರ್ಮಿಕ ಉನ್ಮಾದ: ಹಾಗೂ ಸ್ವರಮಾಧುರ್ಯವನ್ನು ಸಾಧಿಸುವ ಸಲುವಾಗಿ, ಶಾಸ್ತ್ರೀಯ ವ್ಯಾಕರಣದ ನಿಷ್ಠುರ ನಿಯಮಗಳ ಕುರಿತಾದ ಉದಾಸೀನ ಧೋರಣೆ, ಇವೆರಡೂ ಇವರಿಬ್ಬರಿಗೂ ಇರುವ ಸಾಮಾನ್ಯ ಗುಣಗಳು. ಪೋತನರು ತೆಲುಗು ಪದ್ಯಗಳಲ್ಲಿ ಭಾಗವತ-ಪುರಾಣವನ್ನು ಮುಕ್ತವಾಗಿ ಭಾಷಾಂತರಿಸಲು ಯತ್ನಿಸಿದ್ದು, ಅವರ 'ಮಹಾಭಾಗವತಮು', ತೆಲುಗು ಓದುಗರ ನಡುವೆ ಅಪಾರ ಜನಪ್ರಿಯತೆಯನ್ನು ಸಹಾ ಪಡೆದಿದೆ. ಇದಕ್ಕೆ ಕಾರಣ: ಅವರ ಗಾಢ-ಭಕ್ತಿ, ಶ್ರೇಷ್ಠ ನಿರೂಪಣೆ, ಉಚಿತ ನುಡಿಗಟ್ಟುಗಳು ಹಾಗೂ ಸ್ತುತಿಗಳಲ್ಲಿ ಅವರು ಗಾಢ... ಕಾಯ್ದುಕೊಂಡು ಬಂದ ನಾದಮಾಧುರ್ಯ- ಇವುಗಳು. ಆದರೆ ಅವರು ಕೂಡಾ ವ್ಯಾಕರಣವು ಸೂಚಿಸಿದ ಪ್ರಮಾಣಗಳನ್ನು ಅನುಸರಿಸದೇ ಹೋದ ಕಾರಣಕ್ಕಾಗಿ

ವರ್ಷಾನುಗಟ್ಟಲೆ ವಿದ್ವಾಂಸರ, ಅದರಲ್ಲೂ, ವೈಯಾಕರಣಿಗಳ ವಿಮರ್ಶಾತ್ಮಕ ಔದಾಸೀನ್ಯಕ್ಕೆ ಗುರಿಯಾಗಬೇಕಾಯಿತು. ಹೀಗಿರುವಾಗ, ಯಾರ ಗೀತೆಗಳು ಯಾವುದೇ ರೀತಿಯ ಶಿಷ್ಟಾಚಾರವನ್ನೂ ಹೊಂದಿಲ್ಲವೋ ಅಥವಾ ಶಾಸ್ತ್ರೀಯ ನಿಬಂಧನೆಗಳಿಗೆ ಒಳಪಡುವುದಿಲ್ಲವೋ, ಅಂತಹ ಜನಪ್ರಿಯ ಕವಿಯಾದ ಅನ್ನಮಾಚಾರ್ಯರು ತಣ್ಣನೆಯ ತಾತ್ಸಾರ ಮತ್ತು ಪೂರ್ಣ ಅಲಕ್ಷ್ಯಕ್ಕೆ ಈಡಾದುದರಲ್ಲಿ ಅಚ್ಚರಿಯೇನಿಲ್ಲ.

ಪರಿಣಾಮವಾಗಿ, ಅವರ ಕೃತಿಗಳು ವಿಮರ್ಶಕರ ಗಮನ ಸೆಳೆಯಲು, ಮುನ್ನೂರು ವರ್ಷಗಳಿಗೂ ಹೆಚ್ಚು ಕಾಲ ಬೇಕಾಯಿತು. ಹಾಗೂ ಈ ದೀರ್ಘ ಅವಧಿಯಲ್ಲಿ, ತಿರುಪತಿ ದೇವಾಲಯದ ಆವರಣದಲ್ಲಿ ಅವರ ಪದ್ಯಗಳನ್ನು ಜಾಗರೂಕತೆಯಿಂದ ಕೆತ್ತಲಾಗಿದ್ದ ತಾಮ್ರಫಲಕಗಳು ಲಭ್ಯವಿರುವ ವಿಷಯವನ್ನೇ ಮರೆಮಾಚಲು, ಕಾಲ ಮತ್ತು ಸಂದರ್ಭಗಳ ಸಂಚು ನಡೆದಿತ್ತು. ತಾಮ್ರಫಲಕಗಳಲ್ಲಿ ಹಲವು ಅಹೋಬಲದಲ್ಲಿ ಅಡಗಿಸಲ್ಪಟ್ಟಿದ್ದವು. ಹಾಗೂ ಇನ್ನೂ ಕೆಲವು ಶ್ರೀರಂಗಂನಲ್ಲಿ ಇದ್ದಂತೆ ತೋರುವುದು. ಆ ದಿನಗಳಲ್ಲಿ ಅವರ ಗೀತೆಗಳ ತಾಳೆಗರಿಯ ಪ್ರತಿಗಳು ಕೂಡಾ ತಂಜಾವೂರು ಪ್ರದೇಶದಲ್ಲಿ ಅಸ್ತಿತ್ವದಲ್ಲಿದ್ದವು. ಹೀಗೆ ಅವರ ಪದ್ಯಗಳ ನಕಲುಗಳು ಅಷ್ಟು ವಿಶಾಲ ಪ್ರದೇಶದಲ್ಲಿ ಹಂಚಿಹೋಗಿದ್ದುದು ವಾಸ್ತವಿಕ ಸಂಗತಿಯಾಗಿದ್ದರೂ, ಕಳೆದ ಮೂರು ಶತಮಾನಗಳ ಸಾಹಿತ್ಯಕ ದಾಖಲೆಗಳಲ್ಲಿ ಅವುಗಳ ಬಗ್ಗೆ ಏನೊಂದೂ ಉಲ್ಲೇಖವಿಲ್ಲ; ಹಾಗೂ ಈ ನಿಧಿಯನ್ನು ಪರಿಶೋಧಿಸುವ ಮತ್ತು ಅವುಗಳ ಮೌಲ್ಯಮಾಪನ ಮಾಡುವ ಹೊಣೆಯು ಪ್ರಸ್ತುತ ಶತಮಾನದ ವಿದ್ವಾಂಸರ ಪಾಲಿಗೆ ಬಂದಿತು.

ಅನ್ನಮಾಚಾರ್ಯರ ಉಳಿದುಕೊಂಡಿರುವ ಬರಹಗಳಲ್ಲಿ, ಅವರು ಬಾಲ್ಯದಲ್ಲಿಯೇ ತಮ್ಮ ತಂದೆ ಹಾಗೂ ಇತರ ಗುರುಗಳಿಂದ ಸಂಸ್ಕೃತದ ಶ್ರೇಷ್ಠ ಗ್ರಂಥ ಮತ್ತು ಕಾವ್ಯಗಳಲ್ಲಿ ಒಳ್ಳೆಯ ಶಿಕ್ಷಣವನ್ನು ಪಡೆದಿದ್ದರೆಂಬುದನ್ನು ತೋರಲು ಸಾಕಷ್ಟು ಆಧಾರಗಳಿವೆ. ಜಯದೇವನ 'ಗೀತಗೋವಿಂದ'ದ ಪರಿಚಯವು ಅವರಿಗಿದ್ದು, ಅವರು 'ಸಂಕೀರ್ತನ ಲಕ್ಷಣ' ಹೆಸರಿನ ಭಕ್ತಿಗೀತೆಗಳ ಶಿಲ್ಪದ ಬಗೆಗಿನ ಒಂದು ನಿಬಂಧವನ್ನು ಸಂಸ್ಕೃತದಲ್ಲಿ ರಚಿಸಿದುದರ ಜೊತೆಗೆ, ಆ ಭಾಷೆಯಲ್ಲಿಯೇ ಹಲವಷ್ಟು ಗೀತೆಗಳನ್ನೂ ಬರೆದಿದ್ದರು. ಅವರು ತೆಲುಗಿನಲ್ಲಿ ಹನ್ನೆರಡು ಶತಕಗಳನ್ನು, ಹೆಚ್ಚಳವಾಗಿ ಸಂಸ್ಕೃತ ಛಂದಸ್ಸಿನಲ್ಲಿಯೇ ಬರೆದರೆಂದು ತೋರುವುದು; ಅದಾಗ್ಯೂ ಅವುಗಳ ಪೈಕಿ, ಒಂದೇ ಒಂದು ಮಾತ್ರ ಕಾಲನ ಧಾಳಿಯಿಂದ ಉಳಿದುಕೊಂಡು ಬಂದಿದೆ. ಅವರು ವಾಲ್ಮೀಕಿಯ ರಾಮಾಯಣವನ್ನು ತೆಲುಗಿನಲ್ಲಿ 'ದ್ವಿಪದ' ಛಂದಸ್ಸಿನಲ್ಲಿ ಭಾಷಾಂತರಿಸಿದ್ದರೆಂದು ಕಾಣುವುದು. ಈ ಕೃತಿಯು ಕಳೆದುಹೋಗಿದ್ದರೂ ಅದೇ ಛಂದಸ್ಸಿನಲ್ಲಿ ಅವರು ಬರೆದ 'ಶೃಂಗಾರ ಮಂಜರಿ' ಎಂಬ ಮತ್ತೊಂದು ಕಥಾಕಾವ್ಯವು ಪತ್ತೆಯಾಗಿ ಪ್ರಕಟಿತಗೊಂಡಿದೆ. ಈ ಎಲ್ಲಾ ಸಂಗತಿಗಳ ದೃಷ್ಟಿಯಿಂದ ಅನ್ನಮಾಚಾರ್ಯರು ತಾವು ಬಯಸಿದ್ದಲ್ಲಿ, ದೀರ್ಘಕಥನಕಾವ್ಯಗಳನ್ನು ಶಾಸ್ತ್ರೀಯ ಛಂದಸ್ಸಿನಲ್ಲಿ ಸುಲಭವಾಗಿ ಬರೆದು, ಅದರಿಂದ ಸಮಕಾಲೀನ ಸಾಹಿತ್ಯ ಸಮೂಹದಲ್ಲಿ ಸಂಮಾನವನ್ನು ಸಂಪಾದಿಸಿಕೊಳ್ಳಲು ಸಾಧ್ಯವಿದ್ದಿತೆಂಬುದನ್ನು ನಂಬುವುದು ಸಕಾರಣವಾಗಿಯೇ ಇದೆ. ಪ್ರತಿಯಾಗಿ, ದೇಸಿ-ಸಂಪ್ರದಾಯವನ್ನು

ಅನುಸರಿಸಬೇಕೆಂಬ ಹಾಗೂ ಜನಪ್ರಿಯ ಗೀತೆಗಳನ್ನು ರಚಿಸಬೇಕೆಂಬ ಅವರ ಸಂಕಲ್ಪವು, ಶ್ರೀ ವೆಂಕಟೇಶ್ವರನಲ್ಲಿ ಅವರಿಗಿದ್ದ ನಿಷ್ಠಾಭಕ್ತಿಯ ಹಾಗೂ ತಮ್ಮ ಸಹ-ಜೀವಿಗಳ ಬಗೆಗಿದ್ದ ಅನುಕಂಪದ, ಅಳತೆಗೋಲಾಗಿದೆ. ಅವರು ಭರವಸೆಯ ಸಂದೇಶವೊಂದನ್ನು ಹೊಂದಿದ್ದರು ಹಾಗೂ ಅವನ್ನು ಲೌಕಿಕ-ಜೀವನದಲ್ಲಿ ಸಿಲುಕಿಕೊಂಡು ಯಾತನೆಪಡುತ್ತಿದ್ದ ಜೀವಿಗಳಿಗೆ ತಲುಪಿಸಬೇಕಾದ ತುರ್ತು ಅಗತ್ಯವಿತ್ತು. ಆದುದರಿಂದ ಈ ಉದ್ದೇಶಕ್ಕಾಗಿ ಅವರು ಗೀತೆಗಳನ್ನು ತಮ್ಮ ಮಾಧ್ಯಮವನ್ನಾಗಿ ಜಾಣ್ಮೆಯಿಂದ ಆರಿಸಿಕೊಂಡರು. ಹಾಗಾಗಿ, ಅವರು ಒಂದು ಅರ್ಥದಲ್ಲಿ ತೆಲುಗಿನ ಗೀತಕಾವ್ಯಗಳ ಮೂಲಪುರುಷರಾದರು, ಅಲ್ಲದೆ ಆ ಕ್ಷೇತ್ರದಲ್ಲಿ ಅಗ್ರಗಾಮಿಯಾಗಿ ಕ್ಷೇತ್ರಯ್ಯ ಮತ್ತು ತ್ಯಾಗರಾಜರಿಗೂ ದಾರಿ ತೋರಿದರು. ಅವರೀರ್ವರೂ ಅನ್ನಮಾಚಾರ್ಯರ ಮಾರ್ಗದರ್ಶನದಿಂದ ಲಾಭಹೊಂದಿದರು, ಹಾಗೂ ಅತ್ಯುತ್ತಮ ಗೀತೆಗಳನ್ನು ರಚಿಸಿದರು. ಅದಾಗ್ಯೂ ಅವುಗಳು ವ್ಯಾಪ್ತಿಯ ದೃಷ್ಟಿಯಿಂದ ಅನ್ನಮಾಚಾರ್ಯರ ಕೃತಿಗಳಿಗೆ ಹೋಲಿಸಿದಲ್ಲಿ, ಸೀಮಿತವಾದವುಗಳೇ ಎಂಬುದನ್ನು ಬೆರಳು ಮಾಡಿ ಹೇಳಬಹುದು. ಅವರ ಭಕ್ತಿಯು ವಿವಿಧ ಸಾಮಗ್ರಿಗಳ ರಸಪಾಕವಾಗಿತ್ತು. ಜ್ಞಾನ, ವೈರಾಗ್ಯಭಾವ, ನಿಕಟ ಸ್ನೇಹಭಾವ, ಮಾತೃವಾತ್ಸಲ್ಯದ ಸ್ಪರ್ಶ, ದಾಸನ ಮನೋವೃತ್ತಿ ಹಾಗೂ ಶೃಂಗಾರ ಮತ್ತು ಅಧ್ಯಾತ್ಮದ ಮಿಶ್ರಣ-ಹೀಗೆ, ಭಕ್ತ ಮತ್ತು ಭಗವಂತನ ನಡುವಣ ಬಾಂಧವ್ಯದ ಕುರಿತು, ಅಷ್ಟೊಂದು ವೈವಿಧ್ಯತೆಯನ್ನು ಬೇರೆ ಎಲ್ಲಿಯಾದರೂ ಸಹ ಸಾಧಿಸುವುದು ತುಂಬಾ ಕಷ್ಟಸಾಧ್ಯವಾದುದೇ.

ವಿಷ್ಣುಭಕ್ತಿಯ ಹಾಗೂ ಆತನಲ್ಲಿ ಸಂಪೂರ್ಣ ಶರಣಾಗತಿಯ ಪರಿಕಲ್ಪನೆಯನ್ನು ಪ್ರಚಾರಗೊಳಿಸುವ ಉತ್ಸುಕತೆಯಲ್ಲಿ ಅನ್ನಮಾಚಾರ್ಯರು ತಮಗೆ ತಿಳಿದಿದ್ದ ಎಲ್ಲ ಜನಪದ ಕಲಾ-ಪ್ರಕಾರಗಳನ್ನು ಬಳಸಿಕೊಂಡರು ಹಾಗೂ ಅವರ ಗೀತ ಸಂಗ್ರಹದ ವ್ಯಾಪ್ತಿ ಮತ್ತು ಶ್ರೀಮಂತಿಕೆಯು, ಹದಿನೈದನೆಯ ಶತಮಾನದಲ್ಲಿ ರೂಢಿಯಲ್ಲಿದ್ದ ಜಾನಪದಗೀತೆಗಳನ್ನು ಕುರಿತ ನಮ್ಮ ತಿಳುವಳಿಕೆಯನ್ನು ಬಹುವಾಗಿ ಹೆಚ್ಚಿಸುತ್ತವೆ. ತೆಲುಗುಮಂದಿಯ 'ದೇಸೀ' ಗಾಯನ ಪರಂಪರೆಯ ಬಗ್ಗೆ ಅಭಿನಂದನೀಯ ಉಲ್ಲೇಖಗಳು, ಪುರಾತನ ಲಕ್ಷಣಗ್ರಂಥಗಳಾದ 'ಬೃಹದ್ದೇಶಿ', 'ಸಂಗೀತ ಚೂಡಾಮಣಿ', ಮತ್ತು 'ಅಭಿಲಾಷಿತಾರ್ಥ-ಚಿಂತಾಮಣಿ' ಇವುಗಳಲ್ಲಿ ಕಾಣಬರುವುದಲ್ಲದೆ, ಹಲವು ಪ್ರಕಾರದ ಗೀತ ರಚನಾಕ್ರಮವು ಕೂಡಾ, ಅವುಗಳಲ್ಲಿ ವಿವರಿಸಲ್ಪಟ್ಟಿದೆ. ನನ್ನೆಚೋಡ ಮತ್ತು ಪಾಲಕುರ್ಕಿ ಸೋಮನಾಥರಂತಹ ಹನ್ನೆರಡು ಮತ್ತು ಹದಿಮೂರನೇ ಶತಮಾನಗಳ ಶೈವಕವಿಗಳ ಕೃತಿಗಳು, ಅವುಗಳ ಮೇಲೆ ಇನ್ನೂ ಹೆಚ್ಚಿನ ಬೆಳಕು ಚೆಲ್ಲಿವೆ. ಅನ್ನಮಾಚಾರ್ಯರ ಗೀತೆಗಳ ಪ್ರಕಟಣೆಯು, ಶಾಸ್ತ್ರದೊಡನೆ ಪ್ರಯೋಗದ ಸಂಬಂಧ ಕಲ್ಪಿಸಲು ಹಾಗೂ ಅವುಗಳ ವಸ್ತು ಮತ್ತು ಸ್ವರೂಪಾಧಾರಿತ ಗುಂಪುಗಳನ್ನಾಗಿ ವರ್ಗೀಕರಿಸಲು, ವಿದ್ವಾಂಸರಿಗೆ ಅನುವಾಗಿದೆ. ಜನಪದ ಗೀತರೂಪಗಳನ್ನು ಆಧರಿಸಿದ ಅವರ ಗೀತೆಗಳ ಬಗೆಗಳೆಂದರೆ: ಜೋಲ ಪಾಟಲು (ಲಾಲಿ ಹಾಡುಗಳು), ಸೋಬಾನಲು (ಮದುವೆ ಹಾಡುಗಳು), ಧವಲಮುಲು (ಮದುವೆಯಲ್ಲಿ ಆಶೀರ್ವಾದದ ಹಾಡುಗಳು), ಸುಪ್ಪಿಪಾಟಲು (ಭತ್ತ ಕುಟ್ಟುವಾಗಿನ ಹಾಡುಗಳು), ಸಂವಾದ ಪದಮುಲು (ಯುಗಳ

ಗೀತೆ) ಹಾಗೂ ಡೊಲುಚಿ ಪದಮುಲು (ಮಕ್ಕಳನ್ನು ಮುದ್ದಿಸುವಾಗಿನ ಹಾಡುಗಳು).

ಅನ್ನಮಾಚಾರ್ಯರ ಸೇವೆಯು ಸಾಹಿತ್ಯಕ್ಕೆ ಅಮಿತವಾಗಿರುವಂತೆಯೇ, ತೆಲುಗುಭಾಷೆಗೆ ಅವರ ಕೊಡುಗೆಯೂ ಸಹಾ ಬಹು ವಿಸ್ತೃತವಾದುದು. ಅವರ ಶಬ್ದ-ಜ್ಞಾನವು ಬಹು ವಿಶಾಲವೂ ಮತ್ತು ಈಗ ಪ್ರಚಲಿತವಾಗಿಲ್ಲದ ಹಲವಾರು ಪದಗಳಿಂದ ತುಂಬಿರುವುದೂ, ಆಗಿದ್ದು ಹಲವು ಶಬ್ದಕೋಶತಜ್ಞರು ಅವರ ಕೃತಿಗಳಲ್ಲಿ ಕಂಡುಬರುವ ಅನೇಕ ಒಳನುಡಿಗಳ ಅರ್ಥವನ್ನು ನಿರ್ಣಯಿಸಲು ಇನ್ನೂ ಶ್ರಮಿಸುತ್ತಿದ್ದಾರೆ. ಅವರ ಕಾಲದ ಕೃತಿಗಳಲ್ಲಿ, ಬೇರೆಡೆ ಕಾಣಬರುವ ಪದಗಳು ಮತ್ತು ನುಡಿಗಟ್ಟುಗಳ ವಿಷಯದಲ್ಲಿ ಕೂಡಾ, ಅವುಗಳ ಸರಿಯಾದ ಅರ್ಥವನ್ನು ಗ್ರಹಿಸಲು, ಅನ್ನಮಾಚಾರ್ಯರು ಅವನ್ನು ಬಳಸಿಕೊಂಡಿರುವುದೇ ಸಾಕಷ್ಟು ಸುಳಿವು ನೀಡಲು ಒದಗಿಬರುತ್ತದೆ. ಅವರ ಗೀತೆಗಳು ಅಸಂಖ್ಯಾತ ಸೂಕ್ತ ವಾಕ್ಯಾಂಶಗಳಿಂದ ತುಂಬಿದ್ದು, ಅವುಗಳು ಪ್ರತಿನಿತ್ಯದ ಆಡುಮಾತಿನ ಸಂಗ್ರಹಕ್ಕೂ ಸೇರಿಹೋಗಿವೆ. ಜೊತೆಗೆ, ನುಡಿಗಟ್ಟಿನ ಪದಗಳು, ಜಾಣ ಒಗಟುಗಳು, ಜನಪ್ರಿಯ ಗಾದೆಗಳು, ಸುಂದರ ಪ್ರತಿಮೆಗಳು, ಬೆರಗುಗೊಳಿಸುವ ಉಪಮೆಗಳು, ದಿಟ್ಟ ರೂಪಕಗಳು, ಇವೆಲ್ಲವೂ ಅವರ ಶೈಲಿಗೆ ತಾಜಾ ಪರಿಮಳವನ್ನು ಸೇರಿಸಲೆಂದು ಹದವಾಗಿ ಮಿಶ್ರಣಗೊಂಡಿವೆ. ತೆಲುಗು ಸಾಹಿತ್ಯ ನಿರ್ಮಾಪಕರುಗಳ ಯಾವುದೇ ಪರಿಗಣನಾ ಯತ್ನದಲ್ಲಿಯಾದರೂ, ಅನ್ನಮಾಚಾರ್ಯರ ಹೆಸರು ಪ್ರಮುಖ ಸ್ಥಾನವನ್ನು ಅಲಂಕರಿಸಲೇಬೇಕಾದ ಬದ್ಧತೆಯಿದೆ.

ಅವರ ಉಪಮೆಗಳ ಸೊಗಸು ಅಡಗಿರುವುದು, ಅವುಗಳನ್ನು ಕಾವ್ಯ ಲಕ್ಷಣಗ್ರಂಥಗಳಿಂದ ಆಯ್ದುದಾಗಿರದೆ, ಅವನ್ನು ದಿನನಿತ್ಯದ ಬದುಕಿನಿಂದಲೇ ತೆಗೆದುಕೊಂಡಿರುವ ಕಾರಣಕ್ಕಾಗಿ. ಅವು, ಮಳೆಯಿಂದ ತೋಯ್ದ ಹೊಲಗದ್ದೆಗಳು, ಹೊಸದಾಗಿ ಕೊಯ್ದ ಹುಲ್ಲು, ಕಾಡು ಹೂಗಳು, ಯಾಗ ಕುಂಡದಲ್ಲಿ ಉರಿವಕೊಳ್ಳಿಗಳು, ಗುಡಿಸಿಲಿನ ಅಡುಗೆಮನೆಯಲ್ಲಿನ ಕರಗುತ್ತಿರುವ ಬೆಣ್ಣೆ-ಇವುಗಳ ಸೊಗಡನ್ನು ಹೊಂದಿದ್ದು, ಅವೆಲ್ಲವೂ ಆಂಧ್ರದ ಹಳ್ಳಿಗಾಡಿನ ಕಳೆದುಹೋದ ದಿನಗಳ ಚಿರಪರಿಚಿತ ನೋಟವೇ ಆಗಿವೆ. ಕೆಳಕಾಣಿಸಿದ ಪದ್ಯವು ತನ್ನ ಸುತ್ತಲ ಜಗತ್ತಿನಿಂದಲೇ, ಹೋಲಿಕೆಗಳನ್ನು ಆನಂದವಾಗಿ ಆರಿಸಿಕೊಂಡಿರುವುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ.

ಎಲ್ಲಿತ್ತು ನನ್ನ ಜ್ಞಾನ
ಎಲ್ಲಿತ್ತು ನನ್ನ ಜಾಣ್ಮೆ?
ಕಳೆಯಿತಯ್ಯೋ ನನ್ನ ವೇಳೆಯು
ಬೂದಿರಾಶಿಯ ಮೇಲೆ
ಸುರಿದ
ಹವಿಸ್ಸಿನ ಹಾಗೆ!

ಆಮಿಷಗಳಿಂದ ಕೂಡಿ ನಾನು
ಓಡಿದೆನಯ್ಯ
ಈ ಹಾದಿಯನು,

ಲಾಭ ಪಡೆದೇನೆಂಬ
ಬರಡು ಭರವಸೆಯಲಿ
ನನ್ನ ಹೊತ್ತು ಓಡಿತಲ್ಲೋ,
ಪೊದೆಯುಲಡಗಿ
ಕಣ್ಮರೆಯಾದ
ಹರಿಣಿಯ ತೆರದಿ!

ನನ್ನ ಅಳಲು ಕಳೆದೀತೆಂಬ
ಹುಂಬ ನಂಬುಗೆಯಿಂದ
ಕೊನೆಯಿರದ ಕಷ್ಟಗಳ
ಕಾವನ್ನು ಸಹಿಸಿದೆನೋ
ನನ್ನ ಕಾಲವು ಕರಗಿತಲ್ಲೋ,
ಅಡುಗೆಯೊಲೆಯ
ಬಳಿಯಲಿಟ್ಟ ಬೆಣ್ಣೆಯವೊಲು!

ಹರುಷವನು
ಹುಡುಹುಡುಕುತಲಿ
ಎಡೆಯಿಂದಲೆಡೆಗೆ
ಅಲೆದಾಡಿದೆನು ದಂಡವಾಗಿ
ವೆಂಕಟಾದ್ರಿಯ ಒಡೆಯನನು
ಕಂಡುಕೊಳಲಾರದೆಯೆ,
ನನ್ನ ಸಮಯ ಸಂದಿತಲ್ಲೋ
ದಂತಕಥೆಯಂತೆ!

ತನ್ನ ಕಾಲವನ್ನು ಜಾಣತನದಿಂದ ಕಳೆಯಲಿಲ್ಲವೆಂಬ ಕವಿಯ ಕೊರಗನ್ನು, ಈ ಗೀತೆಯಲ್ಲಿ ನಾಲ್ಕು ಉಪಮೆಗಳ ಸಹಾಯದಿಂದ ವ್ಯಕ್ತಗೊಳಿಸಲಾಗಿದೆ.

1. ಯಾಗಗಳ ಆಚರಣೆಯಲ್ಲಿ ಬಯಸಿದ ಫಲವನ್ನು ಹೊಂದಲು, ಆಹುತಿಯ ಅಗ್ನಿಗೆ ತುಪ್ಪವನ್ನು ಅರ್ಪಿಸಲಾಗುವುದು; ಬದಲಿಗೆ, ಬೂದಿಯ ರಾಶಿಯ ಮೇಲೆ ಅದನ್ನು ಸುರಿಯುವುದು ಕಡು ವ್ಯರ್ಥ. ಈ ಉಪಮೆಯು ಆತನ ಕಾಲವು ನಿಷ್ಫಲ-ಕೃತ್ಯಗಳಲ್ಲಿ ಕಳೆದುಹೋಯಿತೆಂಬ ಸಂಗತಿಯನ್ನು ಒತ್ತಿ ಹೇಳುತ್ತದೆ.

2. ಬೇಟೆಗಾರನು ತಾನು ಹಿಂಬಾಲಿಸಿದ ಜಿಂಕೆಯ ಜಾಡನ್ನು ಹಿಡಿಯಲಾರದೆ ಹೋದಲ್ಲಿ, ಅವನು ಬರಿದೇ ಮನೆಗೆ ಮರಳಬೇಕಾಗುವುದು. ಜಿಂಕೆಯನ್ನು ತಪ್ಪಿಸಿಕೊಳ್ಳಲು ಮತ್ತು ಪೊದೆಯಲ್ಲಿ ಅಡಗಿಕೊಳ್ಳಲು ಬಿಟ್ಟುದಾದರೆ, ಬೇಡನ ಕಾಲವು ಅಕ್ಷರಶಃ ವ್ಯರ್ಥ-ಹುಡುಕಾಟದಲ್ಲಿ ದಂಡವಾದಂತೆ.

3. ಬೆಣ್ಣೆಯನ್ನು ಬೆಂಕಿಯ ಬಳಿ ಇಟ್ಟರೆ ಅದು ಕರಗಿಹೋಗಿ ತನ್ನ ಮೂಲ

ರೂಪವನ್ನು ಕಳೆದುಕೊಳ್ಳುವುದು ಮತ್ತು ಈ ಪ್ರಕ್ರಿಯೆಯು ತಂತಾನೇ ನಡೆವಂಥದು: ಕವಿಯ ಕಾಲವು ಕೂಡಾ ಹಾಗೆಯೇ ಕರಗಿಹೋಗುವುದು, ಅದು ಆತನ ಗುರಿಯಲ್ಲದಿದ್ದರೂ ಸಹಾ.

4. ಕಟ್ಟು ಕತೆಯು ಕಾಲ್ಪನಿಕವಾದುದೇ, ಅದಕ್ಕೆ ಯಾರೂ ಮನ್ನಣೆ ನೀಡರು. ಈ ಮಾಯಾ ಪ್ರಪಂಚದಲ್ಲಿ ಏಕೈಕ ಸತ್ಯವೆಂದರೆ ಶ್ರೀ ವೆಂಕಟೇಶ್ವರನೇ. ಆತನನ್ನು ಗ್ರಹಿಸಿಕೊಳ್ಳಲು ತೆಗೆದುಕೊಂಡ ಸಮಯ ಮಾತ್ರವೇ ಜಾಣ್ಮೆಯಿಂದ ಕಳೆದ ಕಾಲ. ಸಿಗದೆಡೆಯಲ್ಲಿ ಸುಖವನ್ನು ಹುಡುಕುವುದೆಂದರೆ, ಕಲ್ಪನೆಯನ್ನೇ ವಾಸ್ತವವೆಂದು ಭ್ರಮಿಸುವ ತಪ್ಪಿನ ಹಾಗೆ.

ಅನ್ನಮಾಚಾರ್ಯರು ವಿದ್ವತ್‌ಲೋಕದಲ್ಲಿ ಸಾಹಿತ್ಯ-ಕಲಾಕಾರನಾಗಿ ಪ್ರತಿಷ್ಠೆಯ ಸ್ಥಾನವನ್ನು ಅಲಂಕರಿಸಿದವರೆಂಬ ಸಂಗತಿಯನ್ನು ಸಿದ್ಧಪಡಿಸಲು ಸಾಕಷ್ಟೇ ಹೇಳಲಾಗಿದೆ. ಅದ್ದರಿಂದ ಅವರ ನ್ಯೂನತೆಗಳ ಮೇಲೆ ಟಿಪ್ಪಣಿ ಬರೆಯುವ ಅಗತ್ಯವಿಲ್ಲ. ಅಷ್ಟರಮೇಲೂ ಪರಿಪೂರ್ಣತೆ ಎಂಬುದು ಪರಮಾತ್ಮನ ಗುಣಲಕ್ಷಣ ಮಾತ್ರವೇ ಆಗಿದ್ದು, ಎಲ್ಲ ಮನುಷ್ಯ ಪ್ರಯತ್ನಗಳೂ ಸ್ವಲ್ಪಮಟ್ಟಿನ ಅಪೂರ್ಣತೆಯಿಂದಲಾದರೂ ಗುರುತಿಸಲ್ಪಡುವುವು. ಅನ್ನಮಾಚಾರ್ಯರ ಕೃತಿಗಳೂ ಇದಕ್ಕೆ ಹೊರತಾದುವಲ್ಲ.

ಗುಣಮಟ್ಟವು ಗಾತ್ರದೊಡನೆ ಯಾವತ್ತೂ ಹೆಜ್ಜೆ ಹಾಕದು; ಒಬ್ಬಾತನ ಉತ್ಪಾದನೆಯು ಯಾವಾಗ ಅಪರಿಮಿತವಾಗಿರುವುದೋ ಆಗ ಅದು ಅಸಮಾನತೆಯಿಂದ ಕೂಡಿರುವುದೂ ಅನಿವಾರ್ಯ. ಅನ್ನಮಾಚಾರ್ಯರ ಲೇಖನ ವ್ಯವಸಾಯವು ದೀರ್ಘಕಾಲವನ್ನು ಕ್ರಮಿಸಿ, ಸಾವಿರಾರು ಗೀತೆಗಳ ರಚನೆಯಲ್ಲಿ ಪರಿಣಮಿಸಿತು. ಅಂತಹ ಕೃತಿಕಾರರ ವಿಷಯದಲ್ಲಿ ಪುನರಾವರ್ತನೆ ಎಂಬ ದೋಷವಿರುವುದು ಅನಿವಾರ್ಯವೇ ಸರಿ. ಅವರ ಎರಡು-ಮೂರು ಗೀತೆಗಳು ಯಾವಾಗ ಸಮಾನಭಾವಕ್ಕೆ ಸಂಬಂಧಿಸಿರುವುವೋ ಹಾಗೂ ಸದೃಶ ನಿರೂಪಣೆ ಮತ್ತು ವಿವರಣೆಗಳನ್ನು ಬಳಸಿಕೊಂಡಿರುವುವೋ, ಆಗ ಅವುಗಳಲ್ಲಿ ಒಂದು ಮಾತ್ರ ಸಹಜವಾಗಿಯೇ ಬೆಳಗುವ ರತ್ನದಂತೆ ಹೊಳೆಯುವುದು: ಆದರೆ ಉಳಿದುದು ಅದರ ಎದುರು ಛೇದಿಸದ ವಜ್ರದಂತೆ ತುಸುಮಂಕಾಗಿಯೇ ತೋರುವುದು.

ಅನ್ನಮಾಚಾರ್ಯರ ಗೀತೆಗಳು ರಚಿತವಾದುದು ಕಿವಿಗಳಿಗಾಗಿ, ಕಣ್ಣುಗಳಿಗಲ್ಲ. ಕೆಲವು ನಿರ್ದಿಷ್ಟ ಗೇಯತೆಯ ಪರಿಣಾಮಗಳನ್ನು ಸಾಧಿಸಿಕೊಳ್ಳಲು ಅವರು ಧ್ವನಿಸಾಮ್ಯ, ಆದಿಪ್ರಾಸ, ಅಂತ್ಯ-ಪ್ರಾಸ, ತಾಳ ಇವುಗಳನ್ನು ಗೀತೆಗಳ ಚೌಕಟ್ಟಿನ ಹಲವು ನಿರ್ದಿಷ್ಟ ಹಂತಗಳಲ್ಲಿ ಬಳಸಿಕೊಳ್ಳಬೇಕಾದ ಅನಿವಾರ್ಯತೆಗೊಳಗಾದರು; ಹಾಗಾಗಿ ಅವರು ಕೆಲವು ಪದಗಳನ್ನು ಅರ್ಥಕ್ಕಾಗಿಯಲ್ಲದೆ ಅವುಗಳ ನಾದಕ್ಕಾಗಿಯೇ ಆರಿಸಿಕೊಳ್ಳಬೇಕಾದ ಒತ್ತಡವಿತ್ತು. ಆ ರೀತಿಯ ಅತಿರಿಕ್ತ ಪದಗಳ ಇರುವಿಕೆಯು ಪದ್ಯದ ಪರಿಣಾಮವನ್ನು ಸಹಜವಾಗಿಯೇ ಕುಗ್ಗಿಸುತ್ತದೆ. ಆದಾಗ್ಯೂ, ಇದು ಅವರ ಕೃತಿಗಳಲ್ಲಿನ ಬಹುಶ್ರುತ ಲಕ್ಷಣವೇನಲ್ಲ. ಆನಂದದಾಯಕ ಕಲ್ಪನೆ ಅಥವಾ ಉತ್ಕಟವಾದ ಭಾವಗಳಿಂದ

ಪ್ರಚೋದಿತರಾದಾಗ, ಅವರು ಅಪ್ರತಿಮ ಸೌಂದರ್ಯ ಮತ್ತು ಪರಿಪೂರ್ಣ ಕೌಶಲ್ಯಗಳಿಂದ ಕೂಡಿದ ಗೀತೆಗಳನ್ನು ನೀಡುವರು ಹಾಗೂ ಅಲ್ಲಿ ಪ್ರತಿಪದವೂ ಒಪ್ಪವಾಗಿ ರೂಪಿಸಿದ ಆಭರಣದಲ್ಲಿ ಕೂಡಿಸಿದ ಅಮೂಲ್ಯ ರತ್ನದಂತೆ ಸಂದರ್ಭೋಚಿತವಾಗಿ ಒದಗುತ್ತದೆ.

ಅನ್ನಮಾಚಾರ್ಯರ ಕಾಲದ ಸಾಹಿತ್ಯದ ಸಾಮಾನ್ಯ ಲಕ್ಷಣವಾಗಿದ್ದುದು ಸಂಭ್ರಮವೇ, ಸಮೃದ್ಧಿಯೇ ಹೊರತು ಸಂಯಮವಲ್ಲ. ಅವರ ರಚನೆಗಳು ಸಹಾ, ನಿರ್ದಿಷ್ಟ ಮಟ್ಟದ ಒಳನೋಟದಿಂದ ಹದಮಾಡಲ್ಪಟ್ಟಿದ್ದಲ್ಲಿ, ಭಾವತೀವ್ರತೆ ಮತ್ತು ಸೊಗಸನ್ನು ಒದಗಿಸಬಲ್ಲಂಥ ಚಿಂತನೆ ಹಾಗೂ ಭಾವನೆಗಳಿಂದ ಕೂಡಿರದೇ ಇರುತ್ತಿರಲಿಲ್ಲ.

ಆದರೂ, ಇವೆಲ್ಲವೂ ಸಣ್ಣಪುಟ್ಟ ಲೋಪಗಳಷ್ಟೇ. ಅವೆಂದೂ ಶ್ರೇಷ್ಠ ಮಟ್ಟದ ಸ್ತುತಿಕಾರರಾಗಿ ಅನ್ನಮಾಚಾರ್ಯರ ಸಾಧನೆಯನ್ನು ಸ್ವಲ್ಪವೂ ಮಸುಕಾಗಿಸವು. ಕಾಳಿದಾಸನ ಪ್ರಸಿದ್ಧ ಉಪಮೆಗೆ ಮೊರೆಹೋಗುವುದಾದರೆ "ಅವು ಚಂದ್ರನ ಮೇಲಣ ಕಪ್ಪನೆಯ ಕಲೆಗಳಂತಿದ್ದು, ಆ ದಿವ್ಯಪ್ರಭೆಯ ಕಾಂತಿಯನ್ನು ಯಾವುದೇ ರೀತಿಯಲ್ಲೂ ಕುಂಠಿತಗೊಳಿಸವು."34

ಸಾಹಿತ್ಯ ಮತ್ತು ಸಂಸ್ಕೃತಿಗೆ ಅನ್ನಮಾಚಾರ್ಯರು ಬಿಟ್ಟುಹೋದ ಸಮೃದ್ಧ ಬಳುವಳಿಯ ಯಾವುದೇ ಮೌಲ್ಯಮಾಪನವಾಗಲೀ, ಕರ್ನಾಟಕ (ಕರ್ಣಾನಂದಗೊಳಿಸುವ) ಸಂಗೀತವೆಂದು ಹೆಸರಾದ ದಕ್ಷಿಣ-ಭಾರತೀಯ ಸಂಗೀತವನ್ನು ರೂಪಿಸಲು ಅವರು ವಹಿಸಿದ ಪುರೋಗಾಮಿ ಪಾತ್ರವನ್ನೂ ಕುರಿತಾದ ಪ್ರಾಸಂಗಿಕ ಉಲ್ಲೇಖವನ್ನಾದರೂ ಮಾಡಲೇಬೇಕು. ರಾಗವು ಭಾರತೀಯ ಸಂಗೀತವೆಲ್ಲದರ ಆಧಾರವೇ ಆಗಿದ್ದರೂ, ಕರ್ನಾಟಕ ಸಂಗೀತದಲ್ಲಿ ಆಲಾಪನೆ (ರಾಗವಿಸ್ತರಣೆ)ಗಿಂತ ಕೃತಿಯೇ ಹೆಚ್ಚಿನ ಪ್ರಾಮುಖ್ಯ ಪಡೆದಿದೆ. ರಾಗ ಕೃತಿಗಳೆರಡೂ ಅವಿಭಾಜ್ಯವಾಗಿದ್ದರೂ ದಾಕ್ಷಿಣಾತ್ಯ ಪದ್ಧತಿಯಲ್ಲಿ ಪ್ರಾಮುಖ್ಯತೆಯ ವಿಷಯವಾಗಿ ಮಾತ್ರ ಬದಲಾವಣೆಯಿದ್ದು, ಅದು ಆಲಾಪವನ್ನು ಸಂಕ್ಷಿಪ್ತಗೊಳಿಸುವಲ್ಲಿ ಮತ್ತು ಕೃತಿಯನ್ನು ವಿಸ್ತರಿಸುವಲ್ಲಿ ಫಲಕಾರಿಯಾಗಿದೆ. ಅಂತಹ ಪರ್ವಗಳು, ಸಂಗೀತದ ವಿಕಾಸದಲ್ಲಿ ಸದಾ ಮುಖ್ಯವಾದುವು ಹಾಗೂ ಈ ಪ್ರಕ್ರಿಯೆಯನ್ನು ತೀವ್ರಗೊಳಿಸಲು, ಸಂತ-ಕವಿಗಳ ಕೃತಿಗಳು ಪ್ರಧಾನಪಾತ್ರವನ್ನು ವಹಿಸಿವೆ. ಕಾಲದ ಗಣನೆಯಿಂದ, ಅನ್ನಮಾಚಾರ್ಯರು ಅವರಲ್ಲಿ ಮೊದಲಿಗರು. ಅವರ ಭಕ್ತಿಗೀತೆಗಳು ಮತ್ತು ಅವುಗಳ ರಚನಾಕ್ರಮವನ್ನು ಕುರಿತಾದ 'ಸಂಕೀರ್ತನ ಲಕ್ಷಣಂ' ನಿಬಂಧವು, ಕರ್ನಾಟಕ ಸಂಗೀತದ ಉಗಮಕ್ಕೆ[35] ದಾರಿ ಮಾಡಿಕೊಟ್ಟವೆಂಬುದನ್ನು, ಸಂಗೀತ ಶಾಸ್ತ್ರಕಾರರು ಮೊದಲಿಗೇ ಒಪ್ಪುತ್ತಾರೆ. ಅವರ ಕಿರಿಯ ಸಮಕಾಲೀನರಾದ ಪುರಂದರದಾಸರು, ಅದನ್ನು ಪರಿಷ್ಕಾರಗೊಳಿಸಿದರು ಹಾಗೂ ತಮ್ಮ ಕೊಡುಗೆಯ ವೈಶಾಲ್ಯದ ಕಾರಣದಿಂದ ಕರ್ನಾಟಕ ಸಂಗೀತದ ಮೂಲಪುರುಷರೆಂದು ಪರಿಗಣಿತರಾದರು. ಈ ಕ್ಷೇತ್ರದ ಉನ್ನತ ವ್ಯಕ್ತಿಯೆಂದರೆ ತ್ಯಾಗರಾಜರು. ಅವರು ತಮ್ಮ ಗಣ್ಯ ಪೂರ್ವಿಕರಾದ ಅನ್ನಮಾಚಾರ್ಯ ಮತ್ತು ಪುರಂದರದಾಸರಿಗೆ, ತಮ್ಮ ರಚನೆಗಳ ಶಿಲ್ಪವನ್ನು ಅಭಿವೃದ್ಧಿಗೊಳಿಸಿಕೊಳ್ಳುವಲ್ಲಿ ಮತ್ತು ಸಂಗೀತ ಪದ್ಧತಿಯನ್ನು ಪರಿಪೂರ್ಣವಾಗಿಸುವಲ್ಲಿ, ಬಹಳಷ್ಟೇ ಋಣಿಗಳಾಗಿರುವರು. ಅಷ್ಟೇ ಸಮಾನವಾಗಿ

ಪ್ರಮುಖವಾದುದೇನೆಂದರೆ-ದೈವತ್ವವನ್ನು ಸಂಪಾದಿಸಲು ಸಂಗೀತವೇ ಪರಿಣಾಮಕಾರೀ ವಿಧಾನವಾಗಿದೆ ಎಂಬ ಮಹಾಸತ್ಯವನ್ನು ಅವರಿಂದಲೇ ಅರಿತುಕೊಂಡರು. ತಮ್ಮ ಸುಪರಿಚಿತ ಗೀತೆಯೊಂದರಲ್ಲಿ ಅವರು ಕೇಳುತ್ತಾರೆ: "ಓ ಮನಸ್ಸೇ, ಸಂಗೀತ ಮತ್ತು ಭಕ್ತಿಗಿಂತ ಉತ್ತಮವಾದ ದಾರಿ ಇರುವುದೇ?"

ಕಲೆಯ ಕ್ಷೇತ್ರದಲ್ಲಿ ಅನ್ನಮಾಚಾರ್ಯರ ಸಾಧನೆಯ ಹಲವು ಮುಖಗಳನ್ನು ಪ್ರಸ್ತುತಪಡಿಸುವ ಪ್ರಯತ್ನವೊಂದನ್ನು ಇದುವರೆಗೆ ಮಾಡಲಾಗಿದೆ. ಈಗ ಉಳಿದಿರುವುದೆಂದರೆ, ಅವರು ತಮ್ಮ ಸಹಜೀವಿಗಳಿಗೆ ಸಲ್ಲಿಸಿದ ಅತಿಮಹತ್ತರ ಸೇವೆಯ ಪ್ರಾಮುಖ್ಯವನ್ನು ಎತ್ತಿಹೇಳಬೇಕಾದ್ದು. ಅದೆಂದರೆ, ಮಾನವರು ಹಲವಾರು ಹೆಸರುಗಳಿಂದ ಕರೆದರೂ ಸಹಾ, ಇರುವ ದೇವನು ಮಾತ್ರ ಒಬ್ಬನೇ, ಎಂಬ ಘನವಾದ ಆವಿಷ್ಕಾರದ ಆಧಾರದ ಮೇಲೆ ವಿಶ್ವ-ಸಹೋದರತ್ವದ ಸಂದೇಶವನ್ನು ಅವಿರತವಾಗಿ ಪ್ರಚುರಗೊಳಿಸಿದುದು.

ಅನ್ನಮಾಚಾರ್ಯರು ವಿಷ್ಣುವಿನ ಅತ್ಯಂತ ಮನೋಹರ ಅವತಾರವಾದ ಶ್ರೀ ವೆಂಕಟೇಶ್ವರನ ಸ್ವರೂಪದಲ್ಲಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡರೆಂಬುದೂ, ಹಾಗೂ ವೈಷ್ಣವ ಸಿದ್ಧಾಂತವಾದ "ಪ್ರಪತ್ತಿ"ಯನ್ನು ಸತತವಾಗಿ ಪ್ರಸಾರ ಮಾಡಿದರೆಂಬುದೂ ದಿಟವೇ. ಆದರೆ ಅವರು ಎಂದಿಗೂ ಒಂದು ಗಳಿಗೆಯೂ ಕೂಡ ವಿಷ್ಣುವನ್ನು-ವೈಷ್ಣವಮತವನ್ನು ಬೋಧಿಸುವವೆಂದು ಸಾರಿಕೊಳ್ಳುವ ಮಾನವಜನಾಂಗದ ಚಿಕ್ಕಗುಂಪೊಂದರ ಒಳಿತಿನ ಬಗ್ಗೆ ಮಾತ್ರ ಚಿಂತಿಸುವ, ಒಬ್ಬ ಪಾಂಥೀಯ ದೇವತೆಯೆಂದು ಭಾವಿಸಲಿಲ್ಲ.

"ವಿಷ್ಣು" ಎಂಬ ನೇರ ಪದವೇ, "ವ್ಯಾಪಿಸಿರುವಾತನು" ಎಂದರ್ಥ ಕೊಡುವುದು. ಅದು "ವ್ಯಾಪಿಸಿಕೊಂಡಿರು" ಮತ್ತು "ಒಳಸೇರು" ಎಂಬೆರಡು ಅರ್ಥನೀಡುವ "ವಿಷ್" ಮೂಲದಿಂದ ನಿಷ್ಪನ್ನವಾಗಿದೆ. ಆದ್ದರಿಂದ "ವಿಷ್ಣು"ವೆಂದರೆ, "ಸರ್ವವ್ಯಾಪಿಯು", "ಸ್ಥಳ-ಸಮಯ-ವಸ್ತುಗಳಿಂದ ಸೀಮಿತಗೊಳ್ಳದವನು" ಎಂದರ್ಥ. "ವಿಷ್ಣು ಪುರಾಣ"[36]ದ ಪ್ರಕಾರ, " ಆತನು ವಿಷ್ಣುವೆಂದು ಹೆಸರಾಗಿರಲು ಕಾರಣ, ಇಡೀ ವಿಶ್ವವೇ ಈ ಪರಮ-ಆತ್ಮದ ಚೈತನ್ಯದಿಂದ ವ್ಯಾಪಿಸಲ್ಪಟ್ಟಿರುವುದು." ಕೃಷ್ಣನು ಅರ್ಜುನನಿಗೆ "ಮಹಾಭಾರತ"[37]ದಲ್ಲಿ ಹೇಳುವನು: "ನಾನು ದಿಗ್ಮಂಡಲಗಳನ್ನೆಲ್ಲಾ ವ್ಯಾಪಿಸಿರುವುದರಿಂದ, ನನ್ನ ತೇಜಸ್ಸು ಅತ್ಯಂತ ಪ್ರಧಾನವಾಗಿರುವುದರಿಂದ ಹಾಗೂ ನಾನು ಮೂರುಲೋಕಗಳನ್ನೂ ನನ್ನ ಪಾದಗಳಿಂದ ಅಳೆದುದರಿಂದಲೇ, ನನ್ನನ್ನು ವಿಷ್ಣುವೆನ್ನುವರು" ಹಾಗಾಗಿ, ವಿಷ್ಣುವು ಪರಮ-ಚೇತನ, ಶಾಶ್ವತ-ಬ್ರಹ್ಮ ಮತ್ತು ಸಾಕಾರನೆಂದೂ ಭಾವಿಸಲ್ಪಟ್ಟಿರುವನು ಮತ್ತು ಅನ್ನಮಾಚಾರ್ಯರು, ಆತನನ್ನು ದೇವಪಿತೃ, ಶಾಶ್ವತ ಮಿತ್ರ ಹಾಗೂ ಎಲ್ಲಜೀವರ ಏಕಮಾತ್ರ ಆಶ್ರಯನೆಂದು ಸದಾ ಭಾವಿಸುವರು.

ಅವರು ತಮ್ಮ ಗೀತೆಯೊಂದರಲ್ಲಿ ಆತನನ್ನು ಅಸಂಖ್ಯ ಮತಗಳ ದೇವ-ದೇವತೆಗಳ ಸಾಕಾರರೂಪವೆಂದು ಸಾಕ್ಷಾತ್ಕರಿಸಿಕೊಂಡು, ಆತನ ವಿಶ್ವಾತ್ಮಕತೆಯನ್ನು ಒತ್ತಿಹೇಳುವರು:

ಎಂತು ಬಗೆವರೋ ಭಕುತರು,
ಅಂತೇ ನೀನಾಗುವೆ ಭಗವಂತನೇ
ರೊಟ್ಟಿಯುಳತೆಗೆ ಆಧಾರ-
ಸಿಕ್ಕಷ್ಟು
ಹಿಟ್ಟು, ಎಂಬುದು
ದಿಟವಲ್ಲವೇ?

ವೈಷ್ಣವರು ಒಲವಿಂದ ಪೂಜಿಪರೋ
ವಿಷ್ಣು ನೀನೆಂದು
ವೇದಾಂತ ಬೋಧಕರು
ಪರಬ್ರಹ್ಮ ನೀನೆಂದು ಸಾರುವರು
ಶೈವಧರ್ಮಿಗಳು ನಿನ್ನ
ಶಿವದೇವನಾಗಿ ಕಾಣುವರು,
ಆದಿಭೈರವನು ನೀನೆಂದು
ಕೊಂಡಾಡುವರು ಕಾಪಾಲಿಕರು
ಶಾಕ್ತರ ಪೂಜೆ ನಿನಗೆ-
ಶಕ್ತಿದೇವತೆಯು ನೀನೆಂದು

ದರ್ಶನಗಳು ಕಂಡಿಹವು
ನಿನ್ನ, ಅಗಣಿತ ಬಗೆಗಳಲಿ
ಅಲ್ಪ ನೀನೆಂದು ನೋಡಿದರಿಗೆ
ಅಲ್ಪನಾಗಿಯೇ ತೋರುವೆ
ಘನನು ನೀನೆಂದು ಭಾವಿಪರಿಗೆ
ಉನ್ನತೋನ್ನತನಾಗಿ ಕಾಣುವೆ

ಬಲಹೀನತೆ
ನಿನದಲ್ಲವೋ
ಕೊಳದೊಳಗಿನ
ನಳಿನದಂತೆಯೇ ನೀನು:
ಏಳು-ಬೀಳುಗಳೆಲ್ಲ
ನೀರಾಳದಳತೆಗೊಳಪಟ್ಟವೋ

ಗಂಗಾನದಿಯು
ನೀರಲ್ಲವೇನು
ನದಿಬದಿಯ
ಬಾವಿಗಳಲೂ ತಾನು
ಹರಿದು ಬರುವುದು?

ನಮ್ಮನ್ನೆಲ್ಲ ಸೆರೆಯಾಗಿಸಿಹೆ
ನಿನ್ನ ದೊರೆತನದಲಿ,
ಓ, ವೆಂಕಟಗಿರಿಯ ಒಡೆಯನೇ,
ಶರಣು ಬಂದೆನಯ್ಯ
ನಿನಗೆ, ನಾನು
ನನಗಿದುವೇ
ಪರಮಸತ್ಯವೋ ಎಂದೆ

ಮಿತವಾದ ಜ್ಞಾನ ಮತ್ತು ಅತಿರೇಕದ ಜಾತೀಯ ಅಂಧಶ್ರದ್ಧೆಯ ವ್ಯಕ್ತಿಗಳು ಕೆಲವು ವೇಳೆ, ತೀರಾ ಕ್ಷುಲ್ಲಕ ಕಾರಣಗಳ ಮೇಲಿಂದ ಸಂಪೂರ್ಣ ಅಸಮರ್ಥನೀಯ ವಾದಗಳನ್ನು ಮಾಡುತ್ತಾರೆ: ಅದೇ ರೀತಿ ಶ್ರೀ ವೆಂಕಟೇಶ್ವರನ ವಿಷಯದಲ್ಲೂ ಸಹ-ಆತನು ಶಿವನೇ, ಶಕ್ತಿಯೇ ಇಲ್ಲವೇ ಕಾರ್ತಿಕೇಯನೋ ಆಗಿರುವನೆಂದು; ಆತನು ವಿಷ್ಣುವೇ ಎಂದು ಎರಡನೆಯ ಶತಮಾನದಷ್ಟು ಹಿಂದೆಯೇ, ತಮ್ಮ ಪ್ರಸಿದ್ಧ ಪುರಾಣ 'ಶಿಲಪ್ಪದಿಕಾರಂ'ನಲ್ಲಿ ಇಳಂಗೋ ಅಡಿಗಳ್ ಅವರು ಖಚಿತವಾಗಿ ಗುರ್ತಿಸಿರುವ ವಸ್ತುಸ್ಥಿತಿಯಿದ್ದೂ ಸಹಾ. ಹಾಗೂ ಕಾಲಾನುಕಾಲಕ್ಕೆ ಒಬ್ಬರಾದ ಮೇಲೆ ಮತ್ತೊಬ್ಬ ಆಳ್ವಾರರು, ಇದನ್ನು ಸಮರ್ಥಿಸುವ ಸಾಕ್ಷ್ಯಗಳನ್ನೊದಗಿಸಿದ್ದರೂ ಕೂಡ ಆತನ ಪ್ರತಿಮಾರೂಪದಲ್ಲಿ ಇತರ ದೈವಗಳ ಸಂಕೇತ, ಚಿಹ್ನೆಗಳಿರುವುದನ್ನು ಕುರಿತ ಉಲ್ಲೇಖಗಳು ಆಳ್ವಾರರದೇ ಗೀತೆಗಳಲ್ಲಿಯೂ ಕಂಡುಬಂದಿವೆಯಾದರೂ, ಅವರು ಆತ ವಿಷ್ಣುವೇ ಎಂಬ ಸಂಗತಿಯ ಬಗ್ಗೆ ಒಂದು ಗಳಿಗೆಯೂ ಸಂದೇಹಿಸಲಿಲ್ಲ. ಅನ್ನಮಾಚಾರ್ಯರ ಪದ್ಯವೂ ಕೂಡ, ಭಗವಂತನ ಏಕತ್ವ ಹಾಗೂ ಪರಮಾತ್ಮನ ವಿವಿಧ ಅವತಾರಗಳ ರೂಪ ಮತ್ತು ನಾಮಗಳಲ್ಲಿರುವ ಮೂಲಭೂತ ಅನನ್ಯತೆಯನ್ನು ಸ್ಥಿರಗೊಳಿಸುವ ಗುರಿ ಹೊಂದಿದೆ.

ಈ ಸತ್ಯವು ಯುಗಗಳ ಹಿಂದೆಯೇ, ವ್ಯಾಸಮಹರ್ಷಿಗಳಿಂದ ಅವರ 'ಮಹಾಭಾರತ'ದಲ್ಲಿ ಚೆನ್ನಾಗಿ ಒಡಮೂಡಿಸಲ್ಪಟ್ಟಿದೆ. ಆ ಮಹಾಕಾವ್ಯದ ಅನುಶಾಸನಪರ್ವದಲ್ಲಿ, ವಿಷ್ಣುವಿನ ಅನಂತಗುಣಗಳನ್ನು ಬಣ್ಣಿಸಲೆಂದೇ ರಚಿತವಾದ ಮಹಾಸ್ತುತಿ 'ವಿಷ್ಣುಸಹಸ್ರನಾಮ ಸ್ತೋತ್ರ'ದಲ್ಲಿ ಅವರು ಶಾರ್ವ, ಶಿವ, ಸ್ಥಾಣು, ಶಂಭು, ರುದ್ರ, ಸ್ಕಂದ, ಆದಿತ್ಯ ಮತ್ತು ಭಾನು-ಇಂತಹ ಇತರ ದೈವಗಳ ಹೆಸರುಗಳನ್ನು ಅಳವಡಿಸಿದರು. ಶಂಕರರು ನೀಡಿರುವ ವ್ಯಾಖ್ಯಾನದಂತೆ, ಅದು "ಸರ್ವೋತ್ತಮ ದೈವವೂ, ಎಲ್ಲ ಜೀವಿಗಳನ್ನು ಬೆಳಗುವ ಜ್ಯೋತಿಯೂ, ಅಂತರ್ಗತನಾದ ಅಮರ ದೊರೆಯೂ, ಜಗತ್ತುಗಳ ಸೃಷ್ಟಿ-ಸ್ಥಿತಿ-ಲಯಗಳ ಕರ್ತೃವೂ, ಸಂಚಿತ ಜ್ಞಾನ ನೀಡಿ-ಕರ್ಮ ಬಂಧನವನ್ನು ಕಳಚುವ ವಿಮೋಚಕನೂ, ಆದ ಸರ್ವೋಚ್ಚ ದೈವದ ಸ್ತುತಿಯನ್ನು ಭಜಿಸುವ ಗುರಿಯನ್ನು ಒತ್ತಿ ಹೇಳುವುದು."[38]

ಅನ್ನಮಾಚಾರ್ಯರ ನೈಜ ವೈಷ್ಣವನ ಕಲ್ಪನೆಯು, ವಿಶ್ವವ್ಯಾಪೀ ವಿಷ್ಣುವಿನ ಅವರ ಪರಿಕಲ್ಪನೆಗೆ ಸಂಪೂರ್ಣ ಅನುಗುಣವಾಗಿಯೇ ಇದೆ. ಆಳ್ವಾರರು ಮತ್ತು ಆಚಾರ್ಯರ ಭವ್ಯ ಪರಂಪರೆಯ ಮೌಲಿಕ ಉತ್ತರಾಧಿಕಾರಿಯಾಗಿ, ಅವರು ಜಾತಿ ಮತ್ತು ವರ್ಗಗಳ

ಸಂಕುಚಿತ ಮಿತಿಗಳನ್ನು ಮೀರಿದ್ದಾರೆ. ಯಾವಾತನು ನಿಜವಾದ ಭಕ್ತನೋ, ಆತನು ಮಾತ್ರವೇ ವೈಷ್ಣವನೆಂದು ಪ್ರತಿಪಾದಿಸುತ್ತಾ, ಅವರ ಹಲವಷ್ಟು ಪದ್ಯಗಳು ಈ ವಿಷಯವನ್ನೇ ಪ್ರಸ್ತಾಪಿಸುತ್ತವೆ. ಅವುಗಳಲ್ಲೊಂದರಲ್ಲಿ ಅವರು, ಜಾತಿ ಭೇದಗಳು ಕೇವಲ ದೈಹಿಕ ಶರೀರಕ್ಕೆ ಮಾತ್ರ ಸೀಮಿತವಾದುದೆಂದೂ-ಆದರೆ, ಆತ್ಮವು ಸದಾ ಪರಿಶುದ್ಧವಾದುದೆಂದೂ ಹೇಳುತ್ತಾರೆ. ಅಂತಹ ಭೇದಗಳನ್ನು ವಿಚಾರ ಮಾಡುವುದು ಕಾಲದ ಶುದ್ಧ ಅಪವ್ಯಯ. ಬ್ರಾಹ್ಮಣನಾಗಿ ಜನಿಸಿ, ಕೀಳು ಜಾತಿಯ ಹೆಂಗಸಿನೊಂದಿಗೆ ಜೀವಿಸಿ, ಕೊನೆಗೆ ಭಗವಂತನ ಮೂಲಕವೇ ಮೋಕ್ಷ ಗಳಿಸಿದ ಅಜಾಮಿಳನಂತಹ ವ್ಯಕ್ತಿಗಳ ಜಾತಿಯನ್ನು ನಿರ್ಣಯಿಸುವುದು ಕಷ್ಟಕರ. ವಿಷ್ಣು ಸೇವೆಯ ಮಹತ್ವವನ್ನು ಕಂಡುಕೊಂಡಾತನು ಮಾತ್ರವೇ 'ಸುಜಾತಿ'ಗೆ ಸೇರಿದವನೆಂದು ಹೇಳಬಹುದು.

ತಮ್ಮ ಇನ್ನೊಂದು ಪದ್ಯದಲ್ಲಿ ಅವರು, ಒಬ್ಬನನ್ನು ನಿಜಭಕ್ತನನ್ನಾಗಿಸುವುದು-ಸದ್ಗುಣಗಳ ಕೃತಿಯೇ ಹೊರತು, ಆತನ ಆಕಸ್ಮಿಕ ಜನನವಲ್ಲವೆಂದು ಸಾರುತ್ತಾರೆ.[39]

ಯಾರಾದರೇನು, ಜಾತಿ ಏನಾದರೇನು
ಹರಿಯ ನಂಬಿದಾತನೇ, ಗಣ್ಯನು

ನಿಜಕೆ ನಿಷ್ಠನು
ಪರರ ದೂಷಿಸದವನು
ಜೀವರೆಲ್ಲರಲಿ, ಕರುಣೆ ಉಳ್ಳವನು
ನೆರೆಯವರ ತನ್ನಂತೆ ಬಗೆವವನು

ಶುದ್ಧ ಹೃದಯನು, ಆತ್ಮ-ಸಂಯಮಿಯು
ನೀತಿ-ಮಾರ್ಗವ ಬಿಡದೆ ಹಿಡಿದವನು
ವಿಧಿ-ಆಚಾರಗಳ ಬಂಧನ ಬಿಡಿಸಿಕೊಂಡಿಹನು
ಹರಿ-ಭಕುತಿಯಲೇ ಮನವ ನೆಟ್ಟಿಹನು

ಎಲ್ಲರೊಂದಿಗೆ ಸದಾಶಯದಿ ಬಾಳುವನು
ವೈರಭಾವವೇ ತಾಕದಿರುವವನು
ತನ್ನ ನಿಜಸ್ವರೂಪವನು ಅರಿತವನು
ಶ್ರೀ ವೆಂಕಟೇಶನ, ಮನಸಾರೆ ಸೇವಿಸುವವನು.

ವೈಷ್ಣವ-ತತ್ವವು ಜಾತಿಯ ಪ್ರಶ್ನೆಯ ಬಗ್ಗೆ ಸದಾ ಉದಾರ ದೃಷ್ಟಿಕೋನವನ್ನು ಉತ್ತೇಜಿಸಿದೆ. ಹಾಗೂ ನಿಜವಾಗಿ ಗಮನಿಸಬೇಕಾದದ್ದು-ನಿರ್ದಿಷ್ಟ ಜಾತಿಯಲ್ಲಿ ಒಬ್ಬನ ಆಕಸ್ಮಿಕ ಜನನವಾಗಿರದೆ, ಕರುಣಾಳು ಹರಿಯಚರಣಗಳಲ್ಲಿ ಆತನು ಭಕ್ತಿಯನ್ನು ಜಾಗೃತಿಗೊಳಿಸಿಕೊಂಡಿರುವುದನ್ನೇ ಎಂದು ಒತ್ತಿಹೇಳಿದೆ. ಆಳ್ವಾರರು ವಿವಿಧ ಜಾತಿಗಳಿಗೆ ಸೇರಿದವರಾಗಿದ್ದರು. ಹಾಗೂ ಅವರಲ್ಲಿ ಒಬ್ಬರಾದ ತಿರುಪ್ಪನಾಳ್ವಾರರಂತೂ, ಅಸ್ಪೃಶ್ಯವೆಂದು ಕರೆಯಲಾದ 'ಪಂಚಮ' ಜಾತಿಯ ಜನರಲ್ಲಿ ಹುಟ್ಟಿದವರು. ಆ ಪೂಜ್ಯ ಅನುಭಾವಿಯನ್ನು ಕುರಿತ ಕಥೆಯೊಂದು ವೈಷ್ಣವ ಸಂಪ್ರದಾಯದಲ್ಲಿ ಜಾತಿಗಿಂತ ಭಕ್ತಿಗೆ

ಇರುವ ಔನ್ನತ್ಯವನ್ನು, ನೇರವಾಗಿ ನಿರೂಪಿಸುವುದು: ತನ್ನ ಜಾತಿಯ ವ್ಯಕ್ತಿಯೊಬ್ಬ ಬ್ರಾಹ್ಮಣರ ಸಮೀಪದಲ್ಲಿದ್ದರೆ ಅವರನ್ನು ಮಲಿನಗೊಳಿಸಿದಂತಾಗುವುದೆಂಬ ಪಾರಂಪ ನಂಬಿಕೆಗೆ ಅನುಗುಣವಾಗಿ, ಆತನು ಶ್ರೀರಂಗಂನಲ್ಲಿ ಕಾವೇರಿ ನದಿಯಲ್ಲಿ ಸ್ನಾ ಮಾಡುವಾಗ ತಂತಾನೇ ದೂರದಲ್ಲಿರುತ್ತಿದ್ದನು. ಆದರೂ ಒಮ್ಮೆ, ಶ್ರೀರಂಗನಾ ದಾಸರಾದ ಲೋಕಸಾರಂಗ ಮುನಿಗಳ ಹಾದಿಗೆ ಆಕಸ್ಮಿಕವಾಗಿ ಅಡ್ಡಬಂದ ಕೋಪೋದ್ರಿಕ್ತರಾದ ಆ ಬ್ರಾಹ್ಮಣರು ಅವರೆಡೆಗೆ ಕಲ್ಲುಗಳನ್ನು ತೂರಿದರು; ನಂತ ನದಿಯಲ್ಲಿ ಮತ್ತೊಮ್ಮೆ ಮುಳುಗುವುದರಿಂದ 'ಶುದ್ಧ'ರಾಗಿ, ಪೂಜಾವಿಧಿಗಳಿಗೆಂ ಪಾತ್ರೆಯೊಂದರಲ್ಲಿ ನೀರು ತುಂಬಿಸಿಕೊಂಡು ದೇವಾಲಯಕ್ಕೆ ಬಂದರು. ಆದ ಭಗವಂತನು ಆ ಗರ್ವಿ ಬ್ರಾಹ್ಮಣರನ್ನು ದೇವಾಲಯದ ಒಳಗೆ ಬರಲು ಬಿಡಲ್ಲ ಹಾಗೂ ತನ್ನ ನಿಷ್ಠ-ಭಕ್ತನನ್ನು ಕಲ್ಲಿನಿಂದ ಹೊಡೆದ ಪಾಪಕ್ಕೆ ತಕ್ಕ ಶಿ ಅನುಭವಿಸಬೇಕೆಂದು ಆಗ್ರಹಿಸಿದನು. ಹೀಗಾಗಿ, ಲೋಕಸಾರಂಗ ಮುನಿಗಳು ತಮ್ಮ ಪಾ ತೊಡೆದುಕೊಳ್ಳಲು ಆ 'ಅಸ್ಪೃಶ್ಯ' ತಿರುಪ್ಪನಾಳ್ವಾರರನ್ನು, ಅವರ ವಿರೋಧವನ್ನು ಕಡೆಗಣಿಸಿ, ತಮ್ಮ ಹೆಗಲ ಮೇಲೆ ಹೊತ್ತು ದೇವಾಲಯಕ್ಕೆ ಪ್ರದಕ್ಷಿಣೆ ಮಾಡಬೇಕಾಯಿತ

ಮತ್ತೊಮ್ಮೆ, ವಿಶಿಷ್ಟಾದ್ವೈತದ ಶ್ರೇಷ್ಠ ಪ್ರತಿಪಾದಕರಾದ ರಾಮಾನುಜರು ತಮ ಸಹಜೀವಿಗಳ ದಾರುಣ ಸ್ಥಿತಿಯಿಂದ ಎಷ್ಟು ತೀವ್ರವಾಗಿ ಅನುಕಂಪಿತರಾದರೆಂದರೆ, ಅವರ ಶ್ರೀರಂಗಂ ಬಳಿಯ ತಿರುಕ್ಕೋಟ್ಟಿಯೂರಿನ (ಗೋಷ್ಠಿಪುರಂ) ವಿಷ್ಣು ದೇವಾಲಯ ಗೋಪುರವನ್ನು ಏರಿ ನಿಂತು ಅಲ್ಲಿ ಸೇರಿದ ಎಲ್ಲ ಜನರಿಗೆ, ಅವರ ಜಾತಿ ಸ್ಥಿತಿಗ ಅಂತರವಿಲ್ಲದಂತೆ, ಅವರೆಲ್ಲರೂ ಜಗದ ಬದುಕಿನ ಜಂಜಾಟಗಳಿಂದ ಬಿಡುಗ ಹೊಂದಲೆಂದು, ಪವಿತ್ರವಾದ 'ಓಂ-ನಮೋ ನಾರಾಯಣಾಯ' ಎಂಬ ಅಷ್ಟಾಕ್ಷ ಮಂತ್ರವನ್ನು ಬಹಿರಂಗವಾಗಿ ಬೋಧಿಸಿದರು.

ಅನ್ನಮಾಚಾರ್ಯರ ಗೀತೆಗಳು ಈ ವಿಶಾಲ ದರ್ಶನದಿಂದ ವಿಶಿಷ್ಟವಾಗಿದ್ದು ಭಗವಂತನ ದಯೆಯು ಎಲ್ಲರಿಗೂ ಲಭ್ಯವಿದೆ ಎಂಬ ಉದಾತ್ತ-ಸತ್ಯವನ್ನು ಅನುರಣಿಸುವ ಧ್ವನಿಯಲ್ಲಿ ಮೊಳಗಿಸುತ್ತವೆ:

ದೇವನೊಬ್ಬನೇ, ಆತನೊಬ್ಬನೇ
ಅವನೊಬ್ಬನೇ, ದೇವ ತಾನಾತನೊಬ್ಬನೇ

ಇಲ್ಲಿಲ್ಲ ಸ್ಥಳ
ಮೇಲುಕೀಳುಗಳೆಂಬ
ಭೇಧ-ಭಾವಗಳಿಗೆ,
ಎಲ್ಲ ಜೀವರ
ಒಳಗೆ ಹರಿಯು ತಾನಿರುವ
ಪ್ರಾಣಿಗಳೆಲ್ಲರೂ ಸರಿ-ಸಮಾನರಿಲ್ಲಿ
ಹರಿ ತಾನಿರುವನು,
ಜೀವರೆಲ್ಲರೊಳಗೆ

ತೂಕಡಿಕೆಯ ಸವಿಯು
ಅರಸನಿಗೂ, ಆತನ ಕಾವಲಾಳಿಗೂ, ಒಂದೇ
ವಿಪ್ರ ವಾಸಿಸುವ
ಎತ್ತರದ ನೆಲೆಯೂ
ಅಂತ್ಯಜನಿರುವ
ತಗ್ಗು ನೆಲವೂ, ಒಂದೇ

ವಿಷಯ-ಸುಖವೊಂದೇ,
ಜೀವಜಂತುಗಳೆಲ್ಲರಿಗೂ
ಆಕಾಶ ಜೀವಿಗಳು
ಮೃಗ ಕೀಟಗಳಿಗೂ
ಹಗಲು-ಇರುಳುಗಳೊಂದೇ
ಧನವಂತ-ದೀನರೀರ್ವರಿಗೂ

ಹಸಿವೆಯೊಂದೇ
ಸವಿ-ಸಾತ್ವಿಕ ಆಹಾರ ತಿನುವವನಿಗೂ
ಅಂತೆಯೇ ಕೊಳಕು-ತಂಗಳು
ತಿನಿಸು ಉಣುವವಗೂ
ಸುಳಿವ ಗಾಳಿಯೊಂದೇ
ಕೊಳೆತು ನಾರುವ ಸ್ಥಳಗಳಲಿ ಹಾಗೂ
ತೊಳೆದ ಪರಿಮಳದ ಪದಾರ್ಥಗಳಿಗೂ.

ಆನೆ-ಶುನಕನ ಮೇಲೂ
ಬೆಳಗುವ ಸೂರ್ಯನೊಬ್ಬನೇ
ವೆಂಕಟೇಶನ ಅದ್ಭುತ ನಾಮವು
ಸರಿಸಮನಾಗಿ ಬಲಶಾಲಿಯೋ,
ಪಾತಕಿಯನೂ
ನೀತಿವಂತನನೂ ತಾ ಪೊರೆಯುವಂಥದು.

ಮಾನವನು ತನ್ನ ಸಹಜೀವಿಗಳಿಂದ-ಧರ್ಮಾಂಧತೆ, ಸಿದ್ಧಾಂತಗಳ ವೈರುಧ್ಯ, ಜಾತೀಯ ಅಂಧಶ್ರದ್ಧೆ, ಪರಸ್ಪರ-ಸಂಶಯ ಇವುಗಳಿಂದ ಸಂಕುಚಿತಗೊಂಡ ಒಳಗೋಡೆಗಳಿಂದಾಗಿ ಪ್ರತ್ಯೇಕಿಸಲ್ಪಟ್ಟಿರುವ ಜಗತ್ತಿನಲ್ಲಿ, ಯಾರೊಬ್ಬನೂ ಏಕತೆ, ಸೌಹಾರ್ದ ಮತ್ತು ತಿಳುವಳಿಕೆಯ ಉಪದೇಶವನ್ನು ಪದೇ ಪದೇ ಎದುರು ನೋಡನು. ಜನ್ಮದಾತ ದೇವನು, ಏಕಮೇವಾದ್ವಿತೀಯನಾಗಿದ್ದಲ್ಲಿ, ಆತನ ಕೃಪೆಯು ತನ್ನನ್ನು ಕೋರುವ ಪ್ರತಿಯೊಬ್ಬರಿಗೂ, ಅವರುಗಳ ಅಧ್ಯಾತ್ಮಿಕ ಒಲವು, ಪೂಜಾವಿಧಾನಗಳೇನೇ ಇರಲಿ ಹಾಗೂ ಅವರ ದೇಶ-ಭಾಷೆಗಳ, ವರ್ಣ-ಧರ್ಮಗಳ, ಜಾತಿ-ಮತಗಳ, ಬಾಹ್ಯ-ಅಂತರಗಳ ಗಣನೆಯಿಲ್ಲದಂತೆ, ಖಚಿತವಾಗಿ ದೊರೆಯುವುದು.

ಈ ಧೋರಣೆಯು, ಅವರ ಜನಪ್ರಿಯ ಪದ್ಯವೊಂದರಲ್ಲಿ ವ್ಯಕ್ತಗೊಂಡಿರುವ ಭಾವಕ್ಕೆ, ಸಂಪೂರ್ಣ ಸಮಶ್ರುತಿಯಲ್ಲಿದೆ: 'ಆಕಾಶದಿಂದ ಸುರಿದ ಮಳೆಯನೀರು ತಪ್ಪದೇ ಸಾಗರವನ್ನೇ ಸೇರುವಂತೆ, ಎಲ್ಲ ದೇವರಿಗೆ ಸಲ್ಲಿಸಿದ ನಮಸ್ಕಾರವೂ ಕೇಶವ (ವಿಷ್ಣು)ನನ್ನೇ ತಲುಪುವುದು." ಕೃಷ್ಣನು ಅರ್ಜುನನಿಗೆ ಬೋಧಿಸುವಾಗ, ಇದೇ ನಿಷ್ಕರ್ಷ ಅರ್ಥವನ್ನೇ ಉದ್ದೇಶಿಸಿದ್ದನು. "ಬೇರೆ ದೇವರುಗಳನ್ನು ಪೂರ್ಣವಾಗಿ ನಂಬಿ ಪೂಜಿಸುವ ಭಕ್ತರೂ, ಕೂಡಾ ನಿಜವಾಗಿ ಆರಾಧಿಸುವುದು ನನ್ನನ್ನೇ."[40]

ಅನ್ನಮಾಚಾರ್ಯರು, "ಜಗತ್ತಿನಲ್ಲಿರುವ ಪ್ರತಿಯೋರ್ವನೂ-ತನಗೆ ಗೊತ್ತಿದ್ದೋ, ಇಲ್ಲದೆಯೋ-ವೈಷ್ಣವನೇ" ಎಂಬ ತಮ್ಮ ದೃಢ-ನಂಬಿಕೆಯನ್ನು ಗೀತೆಯೊಂದರಲ್ಲಿ ಸಾರುತ್ತಾ, ಆ ಮಹಾಚೇತನದ ವಿಷಯದಲ್ಲಿ ತಮ್ಮ ವ್ಯಾಪಕವಾದ ದೃಷ್ಟಿಕೋನವನ್ನು ಹಿಡಿದಿಡುತ್ತಾರೆ:

ವೈಷ್ಣವನಲ್ಲದವ,
ಈ ಜಗದಲಾರೂ ಇಲ್ಲ-
ವಿಶ್ವವೆಲ್ಲವೂ, ತಾನು
ವಿಷ್ಣು-ಚೈತನ್ಯಮಯವಾಗಿರಲು

ವಸ್ತುವೆಲ್ಲದರಲಿ ವಿಷ್ಣುವೇ ಇರಲಾಗಿ,
ದೈವರೊಳಗೆ ಬೇಧವೇತಕೆ?
ಯಾವುದೇ ರೂಪದಲಿ ಭಾವಿಸಲಿ ದೇವನನು,
ತಾ ಪಾವನಗೊಳ್ಳುವುದು ನಿಶ್ಚಿತವು.

ಯಾರನಾರಾಧಿಪರು,
ಯಾರ ಧ್ಯಾನಿಪರು, ಮುಖ್ಯವಲ್ಲವೋ
ಹರಿಯವತಾರವಲ್ಲದ ದೈವವೇ
ಇರಲಾರದೆನುವ
ಪರಮಸತ್ಯವನರಿತರೆ ಸರಿಯೋ

ಚಂಚಲಚಿತ್ತ ಪ್ರೇರಿತನಾಗಿ
ಅರ್ಚಿಸಿದರೇನು, ಇತರ ರೂಪಗಳ?
ಅನಾಥರ ದೈವ,
ವೆಂಕಟಗಿರಿಯ ಹಿರಿಯ ದೊರೆ
ಕರುಣಾಹಸ್ತವನು ಚಾಚುವನು,
ಸರ್ವ ಜೀವರಿಗೂ-ತಾರತಮ್ಯವಿಲ್ಲದೆಯೆ.

ಅನ್ನಮಾಚಾರ್ಯರು 'ವಿಷ್ಣು' ಎಂಬ ಪದವನ್ನು ಬಳಸುವುದು-ಯಾವುದೇ ಸಂಕುಚಿತ ಜಾತೀಯ ಅರ್ಥದಲ್ಲಲ್ಲ, ಆದರೆ ಎಲ್ಲ ಜೀವರ ದೈವಿಕ-ಜನಕನಾದ, ವಿಶ್ವದ ಒಡೆಯನ ಪರಮೋನ್ನತ ಸತ್ಯವನ್ನು ಸೂಚಿಸಲು. ಆತನ ಮಕ್ಕಳಂತೆ ನಾವೆಲ್ಲರೂ,

ಬಂಧುತ್ವದ ಸಹಜ ಬಂಧದಿಂದ ಬದ್ಧರಾದವರು ಹಾಗೂ ಒಂದೇ ಆದ, ವಿಶ್ವ-ಕುಟುಂಬಕ್ಕೆ ಸೇರಿದ ಸದಸ್ಯರು. ಇಲ್ಲಿ ಆಸ್ಪದವಿರುವುದು, ದ್ವೇಷ-ಸಂಶಯಗಳಿಗಲ್ಲ; ಆದರೆ ಅರಿವು ಮತ್ತು ಒಲವಿಗಾಗಿ ಮಾತ್ರ. ಪ್ರಾಯಶಃ ಈ ಕಾಲಾತೀತವಾದ ಆದರೆ ಸದಾ ಸಕಾಲಿಕವಾದ, ಸಂದೇಶವೇ-ಆ ಪೂಜ್ಯ ದೇವದೂತರು ತಮ್ಮ ಸಹಜೀವಿಗಳಿಗೆ ಬಿಟ್ಟುಹೋಗಿರುವ ಅತ್ಯಮೂಲ್ಯವಾದ ಆಸ್ತಿ.

# ಟಿಪ್ಪಣಿಗಳು

1. I. 22.20. ಶ್ಲೋಕದ ವಿಶ್ಲೇಷಣೆಗಾಗಿ ನೋಡಿ: ಎ.ಕೆ. ಮಜುಂದಾರರ "ಚೈತನ್ಯ-ಹಿಸ್ ಲೈಫ್ ಅಂಡ್ ಡಾಕ್ಟ್ರಿನ್, ಎ ಸ್ಟಡಿ ಆಫ್ ವೈಷ್ಣವಿಸಂ" (ಬೊಂಬಾಯಿ-ಭಾರತೀಯ ವಿದ್ಯಾ ಭವನ, 1969) ಪು.ಸಂ. 2-4

2. I. 15.3

3. ಡಯಾನಾ ಎಲ್.ಎಕ್., "ದರ್ಶನ್, ಸೀಯಿಂಗ್ ದಿ ಡಿವೈನ್ ಇಮೇಜ್ ಇನ್ ಇಂಡಿಯಾ" (ಚೇಂಬರ್ಸ್‌ಬರ್ಗ್, ಪಿಎ: ಅನಿಮಾ ಪಬ್ಲಿಕೇಷನ್ಸ್, 1985) ಪು.ಸಂ.45

4. ಜಾನ್ ಬಿ. ಕಾರ್ಮನ್, "ದಿ ಥಿಯಾಲಜಿ ಆಫ್ ರಾಮಾನುಜ, ಆ್ಯನ್ ಎಸ್ಸೇ ಇನ್ ಇಂಟರ್-ರಿಲಿಜಿಯನ್ ಅಂಡರ್‌ಸ್ಟಾಂಡಿಂಗ್" (ನ್ಯೂಹೇವನ್ : ಯೇಲ್ ಯೂನಿವರ್ಸಿಟಿ ಪ್ರೆಸ್, 1974) ಪು.ಸಂ.10. 244-48.

5. ತನ್ನ ಅಂತಿಮ ಬೋಧೆಯಲ್ಲಿ ಕೃಷ್ಣನು ಅರ್ಜುನನಿಗೆ ಭಗವದ್ಗೀತೆಯ ಕೊನೆ-ಕೊನೆಗೆ ಹೇಳುತ್ತಾನೆ: 'ನೈತಿಕ ಮತ್ತು ಆಧ್ಯಾತ್ಮಿಕ ಉನ್ನತಿಗಾಗಿ ಮನುಷ್ಯ ಪ್ರಯತ್ನದ ಮೇಲೆ ಅವಲಂಬಿತನಾಗುವುದನ್ನು ಬಿಡಲು, ನನ್ನಲ್ಲಿ ಆಸರೆಯನ್ನು ಬೇಡು; ದುಃಖಿಸಬೇಡ, ನಾನು ನಿನ್ನನ್ನು ಎಲ್ಲ ಪಾಪಗಳಿಂದ ಮುಕ್ತಗೊಳಿಸುವೆನು." (XVIII:66) ವಿಶಿಷ್ಟಾದ್ವೈತ ಮತದ ಅನುಯಾಯಿಗಳು ಈ ಪದ್ಯವನ್ನು, ಚರಮಶ್ಲೋಕವೆಂದು ಉಲ್ಲೇಖಿಸುವರು ಹಾಗೂ ಅದನ್ನು 'ಅಷ್ಟಾಕ್ಷರಿ' ಮತ್ತು 'ದ್ವಯಂ'ಗಳ ಜೊತೆ, ನಿರಂತರ-ಧ್ಯಾನಕ್ಕಾಗಿ ಒದಗಿರುವ ರಹಸ್ಯ ಸೂತ್ರ-ಮಂತ್ರ, ಎಂಬುದಾಗಿ ಪರಿಗಣಿಸುವರು.

6. ಎವೆಲಿನ್ ಅಂಡರ್ ಹಿಲ್, "ಮಿಸ್ಟಿಸಿಸಂ" (ನ್ಯೂಯಾರ್ಕ್:ಇ.ಪಿ.ಡಟನ್, 1911) ಪು.ಸಂ.425.

7. ಪಿ.ಎನ್. ಶ್ರೀನಿವಾಸಾಚಾರಿ, 'ದಿ ವಿಶಿಷ್ಟಾದ್ವೈತ ಆಫ್ ರಾಮಾನುಜ'- "ದಿ ಕಲ್ಚರಲ್ ಹೆರಿಟೇಜ್ ಆಫ್ ಇಂಡಿಯಾ" ಇದರಲ್ಲಿ (ಕಲ್ಕತ್ತಾ: ದಿ ರಾಮಕೃಷ್ಣ ಮಿಷನ್, 1983) III, 300.

8. ವೇದಾಂತ ದೇಶಿಕರ "ದಯಾಶತಕಂ"ನ ಮೊದಲ ಪದ್ಯ.

9. ಕುಲಶೇಖರ ಆಳ್ವಾರರು ವಿಷಯ-ಸುಖದ ಬಗ್ಗೆ, ಸ್ವರ್ಗದ ಅಪ್ಸರೆಯರೊಡನೆ ಕೂಡಾ, ತಮಗಿರುವ ಅಸಡ್ಡೆಯನ್ನು ತಮ್ಮ ಸುಪ್ರಸಿದ್ಧ ಸಂಸ್ಕೃತದ 'ಮುಕುಂದಮಾಲಾ'ದಲ್ಲಿ ಹಾಗೂ ಮತ್ತೊಂದು ಸಂದರ್ಭದಲ್ಲಿ ಸಹಾ, ವ್ಯಕ್ತಪಡಿಸಿರುತ್ತಾರೆ.

ಆರಾಧಿಸುವೆನು
ನಿನ್ನ ಚರಣವನು
ಓ, ದೊರೆಯೆ
ದ್ವೈತದ ಗೊಂದಲವ
ದಾಟಲೆಂದಲ್ಲ, ಇಲ್ಲವೇ
ನರಕದ ಕಾಟಗಳಿಂದ

ಪಾರಾಗಲೆಂದಲ್ಲ,
ಸ್ವರ್ಗಸೀಮೆಯ
ಸುಂದರ ಅಪ್ಸರೆಯರೊಡನೆ
ಸರಸವಾಡಲೆಂದಲ್ಲ,
ಜನ್ಮ ಜನ್ಮಾಂತರಗಳಲಿ
ಎನ್ನ ಹೃದಯ ಮಂದಿರದಲಿ
ನಿನ್ನ ಸನ್ನಿಧಿಗಾಗಿ
ಹಾತೊರೆವೆನೋ

10. ಎ.ಕೆ. ರಾಮಾನುಜಂ, "ಹೈಮ್ಸ್ ಫಾರ್ ದಿ ಡ್ರೌನಿಂಗ್-ಪೋಯಿಮ್ಸ್ ಫಾರ್ ವಿಷ್ಣು ಬೈ ನಮ್ಮಾಳ್ವಾರ್" (ಪ್ರಿನ್ಸ್‌ಟನ್, ಎನ್.ಜೆ.: ಪ್ರಿನ್ಸ್‌ಟನ್ ಯುನಿವರ್ಸಿಟಿ ಪ್ರೆಸ್, 1981) ಪು.ಸಂ. 124.

11. ವಿಷ್ಣುವಿನ ಅಸಂಖ್ಯ ಆಯುಧಗಳ ಪೈಕಿ, ಐದನ್ನು ಬಹುಮುಖ್ಯವೆಂದು ಪರಿಗಣಿಸಲಾಗಿದೆ: ಸುದರ್ಶನ ಚಕ್ರ, ಪಾಂಚಜನ್ಯ ಶಂಖ, ಕೌಮೋದಕೀ ಗದೆ, ನಂದಕ ಖಡ್ಗ ಮತ್ತು ಸಾರಂಗ ಧನು.

12. ಸಂತ-ಕವಿ ತ್ಯಾಗರಾಜರ ಬಗ್ಗೆಯೂ, ಇದೇ ತೆರನಾದ ಕಥೆಯನ್ನು ಹೇಳುತ್ತಾರೆ: ತಮ್ಮ ತಿರುಪತಿಯಾತ್ರೆಯ ಸಂದರ್ಭದಲ್ಲಿ ಅವರು ದೇವಸ್ಥಾನವನ್ನು ಪ್ರವೇಶಿಸಿದಾಗ, ತೆರೆಯೊಂದು ಗರ್ಭಗುಡಿಯೊಳಗಿನ ನೋಟಕ್ಕೆ ಅಡ್ಡ-ಬಂದ ಕಾರಣ, ಅವರು ದೇವರನ್ನು ನೋಡಲಾಗಲಿಲ್ಲವೆಂದು ತೋರುವುದು. ಆಗ, ಅವರು ತಮ್ಮ ಸುಪರಿಚಿತ ಕೀರ್ತನೆ, "ತೆರೆ ತೀಯಗಾ ರಾದಾ" (ನೀನೇಕೆ ನನ್ನ ಅಸೂಯೆಯ ಪರದೆಯನ್ನು ಹರಿಸಬಾರದೋ, ಓ ವೆಂಕಟರಮಣನೇ)ಯನ್ನು ಹಾಡಲು, ತೆರೆಯು ಒಮ್ಮೆಲೇ ತೆರೆದುಕೊಂಡು ಅವರಿಗೆ ದೇವರ ದಿವ್ಯದರ್ಶನವನ್ನು ಒದಗಿಸಿತಲ್ಲದೇ, ಅವರು ಕೂಡಲೇ ಇನ್ನೊಂದು ಗೀತೆಯನ್ನು ಉದ್ಗರಿಸುವಂತೆ ಪ್ರಚೋದಿಸಿತು: "ವೆಂಕಟೇಶಾ ನಿನು ಸೇವಿಂಪನು" (ನಿನ್ನ ಸೌಂದರ್ಯವನ್ನು ಸವಿಯಲು ಒಬ್ಬನಿಗೆ ಅನಂತ ಕಂಗಳು ಬೇಕೋ, ಓ, ವೆಂಕಟೇಶನೇ).

13. ವಿಶಿಷ್ಟಾದ್ವೈತ ಮತದ ಐದು ಪವಿತ್ರ-ದೀಕ್ಷೆಗಳೆಂದರೆ:

i. ತಪ: ಮತಾವಲಂಬನಾಕಾಂಕ್ಷಿಯ ತೋಳುಗಳ ಮೇಲೆ ಶಂಖ-ಚಕ್ರಗಳ ಆಕೃತಿಯನ್ನು ಮೂಡಿಸುವುದು.

ii. ಪುಂಡ್ರ: ವೈಷ್ಣವ-ಮತ ಸಂಕೇತವಾದ ನಾಮಗಳನ್ನು ಹಣೆಯ ಮೇಲೆ ಧರಿಸುವುದು.

iii. ನಾಮ: ತಾನು ನೂತನವಾಗಿ ಪಡೆದುಕೊಂಡ ವಿಷ್ಣುದಾಸತ್ವವನ್ನು ಸೂಚಿಸುವ, ಹೊಸ ಹೆಸರೊಂದನ್ನು ತಳೆಯುವುದು.

iv. ಮಂತ್ರ: ಅಷ್ಟಾಕ್ಷರಿ ಮತ್ತು ತತ್ಸಂಬಂಧೀ ಮಂತ್ರಗಳನ್ನು ಜಪಿಸಲು ಔಪಚಾರಿಕ ಉಪದೇಶ ಪಡೆದುಕೊಳ್ಳುವುದು.

v. ಯಾಗ : ಶರಣಾಗತಿಯ ವಿಧಿ-ಇದನ್ನು ಸಾಮಾನ್ಯವಾಗಿ ಶಿಷ್ಯನ ಪರವಾಗಿ ಗುರುವೇ ನೆರವೇರಿಸುವರು.

14. ತಿರುಮಳಿ-ಶೈ ಆಳ್ವಾರರು, ಕಂಚೀಪುರವನ್ನು ತಮ್ಮ ಶಿಷ್ಯ ಕನಿಕಣ್ಣನ್‌ರೊಂದಿಗೆ ತಕ್ಷಣವೇ ಬಿಟ್ಟು ಹೋಗಬೇಕೆಂಬ ಅಕ್ರಮವಾದ ರಾಜಾಜ್ಞೆಯು ಹೊರಟಾಗ, ತಾವು ನಗರದ ದೊರೆಯನ್ನು ಒಲೈಸಲು ನಿರಾಕರಿಸಿ, ಆ ಭಾವವನ್ನು ತಮ್ಮ 'ನಾನ್ಮುಗಂ ತಿರುವಂದಾದಿ' ಕೃತಿಯ ಹನ್ನೊಂದನೆಯ ಚರಣದಲ್ಲಿ ತೋಡಿಕೊಂಡಿದ್ದಾರೆ.

ಹಾಡಲಾರೆನೋ ನಾನು
ನರರ ಸ್ತುತಿಗಳನು
ಈ ನನ್ನ ನಾಲಿಗೆಯಲಿ

15. ತ್ಯಾಗರಾಜರಿಗೆ ಕೂಡಾ, ಸಮಾನ ಅನುಭವವಾಯಿತು: ಅವರೊಮ್ಮೆ ತಮ್ಮ ಕುಲದೈವ ಶ್ರೀರಾಮನ ಪವಿತ್ರ-ಮೂರ್ತಿಯನ್ನು ಕಳೆದುಕೊಂಡರು. ಅವರ ಅಣ್ಣನೇ ಅವರ ಮೇಲಿನ ದ್ವೇಷಕ್ಕಾಗಿ, ಅದನ್ನು ಕಾವೇರಿ ನದಿಗೆ ಎಸೆದನೆಂದು ತೋರುತ್ತದೆ. ಆದರೆ ಅದು, ಪವಾಡವೆಂಬಂತೆ, ಕೆಲಕಾಲದ ನಂತರ ಅವರಿಗೆ ಮರಳಿ ದೊರೆಯಿತು. ಅವರು ಅಗಲಿಕೆಯ ಅವಧಿಯಲ್ಲಿ ಅನುಭವಿಸಿದ ತೊಳಲಾಟವು, "ಎಂದು ದಾಗಿನಾಡೋ" (ಎಲ್ಲಿ ಅಡಗಿರುವೆ) ಮತ್ತು "ನೇನೆಂಡು ವೆದಕುದುರಾ" (ನಾನೆಲ್ಲಿ ಹುಡುಕಲೋ ದೇವ)-ಅಂತಹ ರಚನೆಗಳಲ್ಲಿ ಪರಿಣಾಮಕಾರಿಯಾಗಿ ವ್ಯಕ್ತಗೊಂಡಿದೆ.

16. 'ಜಗವೇ ರಂಗಸ್ಥಳ: ಜೀವನವು ನಾಟಕಾಭಿನಯ', ಎಂಬ ಆಲೋಚನೆಗಳನ್ನು ವಿವಿಧ ಸಂಸ್ಕೃತಿಗಳು ಹಂಚಿಕೊಂಡಿವೆಯಾದರೂ, ಶ್ರೀರಂಗ ಕ್ಷೇತ್ರದಲ್ಲಿ ವಿಷ್ಣುವಿಗೆ ನೀಡಿರುವ ರಂಗನಾಥ ಹೆಸರನ್ನು-'ವಿಶ್ವರಂಗದ ಒಡೆಯ' ಎಂದು ವ್ಯಾಖ್ಯಾನಿಸಿರುವುದು ಸ್ವಾರಸ್ಯಕರವಾಗಿದೆ.

17. ಭಗವದ್ಗೀತೆ X: 22

18. VII.5.23.

19. XII. 3.51.

20. ತಾಳ್ಳಪಾಕ ಪೆದ್ದ ತಿರುಮಲಾಚಾರ್ಯರ 'ಶ್ರೀ ಭಗವದ್ಗೀತಾ'ದ ತೆಲುಗು ಅನುವಾದಕ್ಕೆ, ಜೆ.ಎನ್. ರೆಡ್ಡಿಯವರ ಪೀಠಿಕೆಯನ್ನು ನೋಡಿ. (ತಿರುಪತಿ: ಶ್ರೀ ವೆಂಕಟೇಶ್ವರ ಯುನಿವರ್ಸಿಟಿ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್, 1978) ಪು.ಸಂ. XXVIII

21. ಅದೇ, ಪು.ಸಂ. XXVIII-XXIX

22. ಅದೇ, ಪು.ಸಂ. VI

23. 'ದಿ ಫೌಂಡೇಶನ್ಸ್ ಆಫ್ ಇಂಡಿಯನ್ ಕಲ್ಚರ್ (ಪಾಂಡಿಚೆರಿ: ಶ್ರೀ ಅರಬಿಂದೋ ಆಶ್ರಮ, 1980) ಪು.ಸಂ. 317.

24. ರೂಪಾ ಗೋಸ್ವಾಮಿನಿಯವರ 'ಪದ್ಯಾವಳಿ'ಗೆ ಅವರು ನೀಡಿರುವ ಮುನ್ನುಡಿಯನ್ನು ನೋಡಿ. (ಢಾಕಾ: ಯುನಿವರ್ಸಿಟಿ ಆಫ್ ಢಾಕಾ, 1934)

25. ಜಯದೇವನ 'ಗೀತಗೋವಿಂದ'ದ ನಿರ್ದಿಷ್ಟ ಉಲ್ಲೇಖವು ಅನ್ನಮಾಚಾರ್ಯರ 'ಸಂಕೀರ್ತನ

ಲಕ್ಷಣ'ನಲ್ಲಿದ್ದು, ಅದು ಸಂಸ್ಕೃತದಿಂದ ತೆಲುಗಿಗೆ, ಅವರ ಮೊಮ್ಮಗ ಚಿನ್ನತಿರುಮಲಾಚಾರ್ಯರಿಂದ ಭಾಷಾಂತರಗೊಂಡಿದೆ.

26. ವಿಷ್ಣುವನ್ನು 'ಕಮಲಲೋಚನ' (ಪುಂಡರೀಕಾಕ್ಷ)ನೆಂದು ವರ್ಣಿಸಲು ಕಾರಣ, ಆತನ ಕಣ್ಣುಗಳು ವಿಶಾಲವೂ-ಉದ್ದವೂ ಆಗಿ, ಹೂವಿನ ದಳಗಳಂತೆ ಸುಂದರವಾಗಿರುವುದಲ್ಲದೆ, ಹಿಂದೂಗಳ ಪ್ರೇಮದೇವ ಮನ್ಮಥನು ತನ್ನ ಬಾಣಗಳಾಗಿ ಉಪಯೋಗಿಸುವ ಪುಷ್ಪಗಳ ಪೈಕಿ, ಅದೂ ಒಂದಾಗಿದೆ.

27. ಸೀರೆ ಎಂಬುದು ಹತ್ತಿಯ ಇಲ್ಲವೇ ರೇಷ್ಮೆಯ ಉದ್ದನೆಯ ಬಟ್ಟೆಯಾಗಿದ್ದು ದೇಹಪೂರ್ತಿ ಉಡಬಹುದಾದ, ಭಾರತೀಯ ಸ್ತ್ರೀಯರ ಪ್ರಮುಖ ಪೋಷಾಕಾಗಿದೆ.

28. ತುಳಸಿ, ಪವಿತ್ರವೆನಿಸಿದ (ಓಸಿಮುವ್ ಸ್ಯಾಂಕ್ಟಮ್) ಸುಗಂಧ ಸಸ್ಯವಾಗಿದ್ದು, ಅದು ವಿಷ್ಣುವಿನೊಡನೆ ಸಂಪರ್ಕ ಪಡೆದಿರುವ ಕಾರಣಕ್ಕಾಗಿ, ಹಿಂದೂ-ಪುರಾಣದಲ್ಲಿ ಪಾವನವಾದುದೆಂದು ಪರಿಗಣಿತವಾಗಿದ್ದು, ಅದರ ದಳಗಳನ್ನು ಪೂಜಾದಿ ಆಚರಣೆಗಳಲ್ಲಿ ಬಳಸಲಾಗುತ್ತದೆ.

29. ಸರಿ-ಸುಮಾರು ಅದೇ ಭಾವವು, ಸಂತ-ಕವಿ ಪುರಂದರದಾಸರ ಪ್ರಸಿದ್ಧ ಕನ್ನಡ ದೇವರನಾಮದಲ್ಲಿಯೂ ವ್ಯಕ್ತವಾಗಿದೆ.

ಕೆರೆಯ ನೀರನು
ಕೆರೆಗೆ ಚೆಲ್ಲಿ
ವರವ ಪಡೆದವರಂತೆ
ಕಾಣಿರೋ

ಹರಿಯ ಕರುಣದೊಳಾದ
ಭಾಗ್ಯವ
ಹರಿ ಸಮರ್ಪಣೆ
ಮಾಡಿ ಬದುಕಿರೋ
ಪುರಂದರ ವಿಠಲರಾಯನ
ಚರಣಕಮಲವ
ನಂಬಿ ಬದುಕಿರೋ

ಕೆರೆಯ ನೀರನು
ಕೆರೆಗೆ ಚೆಲ್ಲಿ
ವರವ ಪಡೆದವರಂತೆ
ಕಾಣಿರೋ.

ವಿಠಲರಾಯ ಎನ್ನುವುದು, ಮಹಾರಾಷ್ಟ್ರ ರಾಜ್ಯದ ಪಂಢರಪುರದಲ್ಲಿನ ಪ್ರಸಿದ್ಧ ಸನ್ನಿಧಿಯಲ್ಲಿ, ಮೂರ್ತಿರೂಪದಲ್ಲಿರುವ ವಿಷ್ಣುವಿನ ಸ್ವರೂಪದ ಹೆಸರು.

30. 'ಶ್ರೀರಂಗ-ಗದ್ಯ'ದಲ್ಲಿದೆ.

31. ಶ್ರೀ ವೆಂಕಟೇಶ್ವರನ ದೇವಾಲಯದ ಸಮೀಪವಿರುವ 'ಸ್ವಾಮಿಪುಷ್ಕರಣಿ' ಹೆಸರಿನ ಕೊಳವು, ತನ್ನಲ್ಲಿ ಮೀಯುವವರ ಎಲ್ಲ ಪಾಪಗಳನ್ನೂ ಕಳೆಯುವ ಸಾಮರ್ಥ್ಯಕ್ಕೆ ಪ್ರಸಿದ್ಧವಾಗಿದೆ. ಭಕ್ತರು ದೇವರನ್ನು ಕೆಲವು ವೇಳೆ ತೆಲುಗು ಭಾಷೆಯ 'ಕೊನೇಟಿ ರಾಯ' ಎಂದರೆ 'ಕೊಳದ ದೊರೆ' ಎಂಬರ್ಥ ಕೊಡುವ ಪದದಿಂದಲೂ ಕರೆಯುತ್ತಾರೆ. 'ಕೊಂಡಾಲ ರಾಯ' ಪದವು, 'ಬೆಟ್ಟಗಳ ಒಡೆಯ'ನೆಂದು ಅರ್ಥಕೊಡುತ್ತದೆ. ಇವೆರಡೂ ಪದಗಳು, ಅನ್ನಮಾಚಾರ್ಯರ ರಚನೆಗಳಲ್ಲಿ ಪದೇ-ಪದೇ ಕಾಣಬರುತ್ತವೆ.

32. ಎತ್ತಿದ ಅಂಗೈಮುದ್ರೆಯು 'ಅಭಯಹಸ್ತ'ವೆಂದು ಹೆಸರಾಗಿದ್ದು, ಭಗವಂತನು ತನ್ನ ಭಕ್ತರನ್ನು ಕಾಪಾಡಲು ಸದಾಸಿದ್ಧನಾಗಿರುವ ಕಾರಣ, ಅವರು ಭಯಪಡಬೇಕಾಗಿಲ್ಲವೆಂಬ ಭರವಸೆ ನೀಡುವ ಉದ್ದೇಶ ಹೊಂದಿದೆ. ಶ್ರೀ ವೆಂಕಟೇಶ್ವರನ ಬಲದ ಕೆಳ ತೋಳು ಅಭಯ ಮುದ್ರೆಯಲ್ಲಿರದೆ, ವರದ (ವರಕೊಡುವ) ಭಂಗಿಯಲ್ಲಿದೆ. ಇವುಗಳ ಹಾಗೂ ಗಂಗಾನದಿ ಮತ್ತು ಬ್ರಹ್ಮರಿಗೆ ಸಂಬಂಧಿಸಿದ ಉಲ್ಲೇಖಗಳಿಂದ, ಅನ್ನಮಾಚಾರ್ಯರು ವಿಷ್ಣುವಿನ ಕುರಿತಾಗಿ ಹೇಳುತ್ತಾರಲ್ಲದೆ-ಶ್ರೀ ವೆಂಕಟೇಶ್ವರನ ಮೂರ್ತಿ-ಸ್ವರೂಪದ ಬಗ್ಗೆ ಅಲ್ಲವೆಂದು ಸಿದ್ಧವಾಗುತ್ತದೆ.

33. ಬ್ರಹ್ಮಸೂತ್ರಗಳ ಬಗೆಗಿನ ತಮ್ಮ ಸುಪ್ರಸಿದ್ಧ ವ್ಯಾಖ್ಯಾನವಾದ 'ಶ್ರೀ ಭಾಷ್ಯ'ದ ಮಂಗಳ ಶ್ಲೋಕ (ಪ್ರಾರ್ಥನಾ ಸ್ತುತಿ)ದಲ್ಲಿ, ರಾಮಾನುಜರು ಲೋಕಗಳೆಲ್ಲದರ ಸೃಷ್ಟಿ, ರಕ್ಷಣೆ ಮತ್ತು ಲಯಗಳು, ಶ್ರೀನಿವಾಸನ ಲೀಲೆಯೆಂದು ಸಾರುತ್ತಾರೆ.

34. "ಕುಮಾರ ಸಂಭವಂ" 1:3

35. ವಿ. ರಾಘವನ್, "ತ್ಯಾಗರಾಜ" (ನ್ಯೂಡೆಲ್ಲಿ: ಸಾಹಿತ್ಯ ಅಕಾದೆಮಿ, 1983) ಪು.ಸಂ.16.

36. 3.1.45

37. 'ಶಾಂತಿ ಪರ್ವ', 328, 37.

38. ಎನ್. ರಘುನಾಥನ್ ಅವರ ಮುನ್ನುಡಿ: 'ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರಂ' (ಬೊಂಬಾಯಿ: ಭಾರತೀಯ ವಿದ್ಯಾಭವನ, 1978) ಪು.ಸಂ. XIV

39. ಗೀತೆಯಲ್ಲಿ ವ್ಯಕ್ತಮಾಡಿದ ಭಾವವನ್ನು, ಗುಜರಾತಿ ಸಂತ-ಕವಿ ನರಸಿಂಹ ಮೆಹ್ತಾರ ಪ್ರಸಿದ್ಧ-ಗೀತೆ 'ವೈಷ್ಣವ ಜನತೋ ತೇನೇ ಕಹಿಯೇ ಜೋ ಪೀರ ಪರಾಯ ಜಾನರೇ'- ಇದರ ಭಾವದೊಂದಿಗೆ ಹೋಲಿಕೆ ಮಾಡಲು ಯುಕ್ತವಾಗಿದೆ.

40. ಭಗವದ್ಗೀತಾ, IX : 23.

❋❋❋

# ಆಯ್ದ ಗ್ರಂಥಗಳ ಸೂಚಿ

## ತೆಲುಗಿನ ಪುಸ್ತಕಗಳು


(ಅ) ಪ್ರಧಾನ-ಮೂಲಗಳು

ತಾಳ್ಳಪಾಕ ಅನ್ನಮಾಚಾರ್ಯ, 'ಅಧ್ಯಾತ್ಮ-ಕೀರ್ತನಾಲು' ಮತ್ತು 'ಶೃಂಗಾರ-ಕೀರ್ತನಾಲು' ಸಂಪುಟಗಳ ಮಾಲಿಕೆಯಲ್ಲಿ ಗೀತೆಗಳ ಸಂಗ್ರಹ. ಕೃತಿ ಇನ್ನೂ ಪ್ರಗತಿಯಲ್ಲಿದೆ. ತಿರುಪತಿ, ತಿರುಮಲ-ತಿರುಪತಿ ದೇವಸ್ಥಾನಂ, 1936.

(ಆ) ಉಪ ಮೂಲಗಳು

ತಾಳ್ಳಪಾಕ ಚಿನ್ನತಿರುವೇಂಗಲನಾಥ (ಚಿನ್ನಣ್ಣ) 'ಅನ್ನಮಾಚಾರ್ಯ ಚರಿತಮು' ಪದ್ಯರೂಪದಲ್ಲಿ ಜೀವನಚರಿತ್ರೆ - ವೇಟೂರಿ ಪ್ರಭಾಕರ ಶಾಸ್ತ್ರಿಗಳ ವಿದ್ವತ್ಪೂರ್ಣ ಪ್ರಸ್ತಾವನೆಯೊಡನೆ. ತಿರುಪತಿ, ತಿರುಮಲ-ತಿರುಪತಿ ದೇವಸ್ಥಾನಂ; 1949

ತಾಳ್ಳಪಾಕ ಪೆದ್ದತಿರುಮಲಾಚಾರ್ಯಲು 'ಶ್ರೀ ಭಗವದ್ಗೀತಾ' - ಜಿ.ಎನ್. ರೆಡ್ಡಿಯವರ ವಿದ್ವತ್ಪೂರ್ಣ ಪ್ರಸ್ತಾವನೆಯೊಡನೆ, ತಿರುಪತಿ, ಶ್ರೀ ವೆಂಕಟೇಶ್ವರ ಓರಿಯಂಟಲ್ ರಿಸರ್ಚ್ ಇನ್ಸ್‌ಟಿಟ್ಯೂಟ್, 1978.

ರಾಳ್ಳಪಳ್ಳಿ ಅನಂತಕೃಷ್ಣಶರ್ಮ "ಅನ್ನಮಾಚಾರ್ಯನಿ ಕವಿತಾ", ವಾಣಿ, VII : 5, 1955.

ವೇಟೂರಿ ಆನಂದಮೂರ್ತಿ, 'ತಾಳ್ಳಪಾಕ ಕಾವ್ಯುಲು, ಕೃತಿಲು' ಹೈದರಾಬಾದ್, 1974 'ತಾಳ್ಳಪಾಕ ಕಾವ್ಯುಲು ಪದಕವಿತಾಲು' ಹೈದರಾಬಾದ್, 1976.

ಮುತ್ತನೂರಿ ಸಂಗಮೇಶಂ, 'ಅನ್ನಮಾಚಾರ್ಯ - ಸಾಹಿತಿ - ಕೌಮುದಿ'. ತಿರುಪತಿ, ತಿರುಮಲ-ತಿರುಪತಿ ದೇವಸ್ಥಾನಂ, 1981.

ಬಾಲಂತ್ರಾಪು ರಜನೀಕಾಂತರಾವ್,'ಆಂಧ್ರ-ವಾಗ್ಗೇಯಕಾರ-ಚರಿತಮು' ವಿಜಯವಾಡ, ವಿಶಾಲಾಂಧ್ರ ಪಬ್ಲಿಷಿಂಗ್ ಹೌಸ್, 1975.


❋❋❋

ತಾಳ್ಳಪಾಕ ಅನ್ನಮಾಚಾರ್ಯ (೧೪೦೮-೧೫೦೩) ಪ್ರಸಿದ್ಧ ಸಂತ - ಕವಿಯಾಗಿದ್ದು, ತಿರುಪತಿಯ ವೆಂಕಟಾದ್ರಿಯ ದೇವಾಲಯದಲ್ಲಿ, ಶ್ರೀ ವಿಷ್ಣುವಿನ ಮೂರ್ತಿ-ರೂಪವಾಗಿ ನೆಲೆಸಿರುವ ಶ್ರೀ ವೆಂಕಟೇಶ್ವರನ ಪ್ರಶಂಸೆಗಾಗಿ, ಸಾವಿರಾರು ಸ್ತೋತ್ರ-ಪದ್ಯಗಳನ್ನು ತೆಲುಗಿನಲ್ಲಿ ರಚಿಸಿದರು. ತೆಲುಗು ಸ್ತೋತ್ರ-ಸಾಹಿತ್ಯದ ಪ್ರವರ್ತಕರಾದ ಅವರು, ಶೃಂಗಾರ ಹಾಗೂ ಅಧ್ಯಾತ್ಮದ ಎರಡೂ ಧಾಟಿಗಳನ್ನು ಸಮಾನ ನೈಪುಣ್ಯತೆಯಿಂದ ನಿರ್ವಹಿಸಬಲ್ಲವರಾಗಿದ್ದರು. ಕ್ಷೇತ್ರಯ್ಯ ಮತ್ತು ತ್ಯಾಗರಾಜರಂತಹ, ಇತರ ಸ್ತುತಿ - ರಚಕರ ಮೇಲೂ ತಮ್ಮ ಪ್ರಭಾವವನ್ನು ಬೀರಿದವರು. ಆ ಕಾಲದಲ್ಲಿ ಅವರ ಗೀತೆಗಳು ಅಪಾರ ಜನಪ್ರಿಯತೆಯನ್ನು ಸಂಪಾದಿಸಿದ್ದವು. ಆದರೆ ವಿವರಿಸಲಾಗದ ಹಲವಾರು ಕಾರಣಗಳಿಂದ, ಕ್ರಮೇಣ ಅವು ರೂಢಿಯಿಂದ ಸರಿದುಹೋಗಿ ಮೂರು ಶತಮಾನಗಳಿಗೂ ಮೀರಿ, ಮರೆಯಲ್ಪಟ್ಟಿದ್ದವು. ಕಳೆದ ಮೂವತ್ತು ವರ್ಷಗಳಲ್ಲಿ, ನಿಷ್ಠಾವಂತ ವಿದ್ವಾಂಸರು ಮತ್ತು ಸಂಗೀತಗಾರರ ಸತತ ಪ್ರಯತ್ನದಿಂದ, ತೆಲುಗು ಭಾಷಿಕರ ನಡುವೆ ಅವು ತಮ್ಮ ಜನಪ್ರಿಯತೆಯನ್ನು ಮರಳಿ ಪಡೆದವು. ಅವರ ಧಾರ್ಮಿಕ ಸಂಭ್ರಮ, ಚಿಂತನೆಗಳ ಗಾಂಭೀರ್ಯ ಹಾಗೂ ಅಭಿವ್ಯಕ್ತಿಯ ಸೊಗಸನ್ನು ಹೊರಸೂಸುವ ಸುಮಾರು ಮೂವತ್ತು ಆಯ್ದ ಪದ್ಯಗಳ ಸೇರ್ಪಡೆಯಿಂದ, ಈ ಕೃತಿಯ ಮೌಲ್ಯವು ಹೆಚ್ಚಾಗಿದೆ.

ಅಡಪ ರಾಮಕೃಷ್ಣರಾವ್ (೧೯೨೭-೧೯೯೫) ಅವರು ಆಂಧ್ರ ಪ್ರದೇಶದ ಶ್ರೀ ಸತ್ಯಸಾಯಿ ಉನ್ನತ ಅಧ್ಯಯನ ಕೇಂದ್ರದಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದರು. ಅವರು ಇಂಗ್ಲೀಷ್, ತೆಲುಗು ಹಾಗೂ ಅಮೆರಿಕೆಯ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿಯನ್ನೂ, ಅಮೇರಿಕಾದ ತತ್ವಜ್ಞಾನಿ ಎಮರ್ಸನ್ ಅವರನ್ನು ಕುರಿತಾದ ತಮ್ಮ ಪ್ರೌಢ-ಪ್ರಬಂಧಕ್ಕಾಗಿ ವಿಸ್ಕಾನ್ಸಿನ್ ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಪದವಿಯನ್ನೂ ಪಡೆದಿದ್ದರು. ಉಭಯ-ಭಾಷಾ ಬರಹಗಾರರಾಗಿದ್ದ ಅವರು ಇಂಗ್ಲೀಷ್ ಮತ್ತು ತೆಲುಗಿನಲ್ಲಿ ಅನೇಕ ಸಂಶೋಧನಾ ನಿಬಂಧಗಳನ್ನೂ, ಪುಸ್ತಕಗಳನ್ನೂ ಪ್ರಕಟಿಸಿದ್ದರಲ್ಲದೆ, ಹಲವಾರು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿದ್ದರು.

ಈ ಕೃತಿಯನ್ನು ಕನ್ನಡಿಸಿದ ಶ್ರೀಮತಿ ಕೆ.ಎನ್. ಭಾಗ್ಯಲಕ್ಷ್ಮಿ ಪದಕಿ ಅವರು ಕನ್ನಡ ಸಾಹಿತ್ಯ, ಪತ್ರಿಕೋದ್ಯಮ ಶಾಸ್ತ್ರ ಹಾಗೂ ಮನಶ್ಶಾಸ್ತ್ರಗಳನ್ನು ಅಭ್ಯಸಿಸಿದವರು. ಸಮೂಹ ಮಾಧ್ಯಮದಲ್ಲಿ ಸ್ನಾತಕೋತ್ತರ ಪದವೀಧರೆ.

Annamacharya (Kannada) Rs. 25
ISBN : 81-260-0981-0